ರಿಂದ ಸಂಸಾರವೇ ಆಕೆಯ ಸರ್ವಸ್ವ. ಸಂಸಾರಸಾರವಾದ ಮಗುವಿನಲ್ಲಿ ಆಕೆಗೆ ಅಗಾಧ ಮಮತೆ. ಗಂಡಹೆಂಡಿರ ಪ್ರೇಮದ ಫಲವೇ ಮಗು. ಒಮ್ಮೆ ಮಗುವಾಯಿತೆಂದರೆ ದಂಪತಿಗಳ ಪ್ರೇಮವು ಹಂಚಿ ಹೋಗುತ್ತದೆ. ದಿಗ್ವಿಜಯಕ್ಕೆ ಹೋದ ಭರತನಿಗೆ ಮಕ್ಕಳಾದಮೇಲೆ, ಮಕ್ಕಳಾಟಿಕೆಯು ಹೆಚ್ಚು ಸಂತೋಷದಾಯಕವಾಗಿರುವಂತೆ ತೋರಿಬರುತ್ತದೆ. ಅಲ್ಲಿಂದ ಮುಂದೆ ಅವನ ಶೃಂಗಾರ ಜೀವನದ ವರ್ಣನೆ ಅಷ್ಟು ಹೆಚ್ಚಾಗಿ ಕಂಡುಬರುವುದಿಲ್ಲ. ಚ್ಯುತಿಯಿಲ್ಲದ, ಕಳಂಕವಿಲ್ಲದ ಸಂತೋಷಸಾಗರಕ್ಕೆ ಇವನು ಅಧಿಪತಿಯಾಗುತ್ತಾನೆ. ವಿಧೇಯರಾಗಿ ವಿನಯಪರರಾಗಿ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಡೆಯುತ್ತಿರುವ ತನ್ನ ಮಕ್ಕಳನ್ನು ಕಂಡು ಭರತನು ಧನ್ಯನಾಗುತ್ತಾನೆ.

ಒಟ್ಟಿನಲ್ಲಿ ಭರತನ ಜೀವನ ರಸವತ್ತಾದ ಜೀವನ. ವಿರಸಗಳು ಬಂದರೂ ಅವುಗಳನ್ನು ಸರಸಕ್ಕೆ ತಿರುಗಿಸಿಕೊಳ್ಳಬಲ್ಲ ಜಾಣ್ಮೆ ಇದೆ. ಇವನಿಗೆ. ಒರಟು ಮೊರಟುಗಳನ್ನು ತಿದ್ದಿ ಹದಕ್ಕೆ ತಂದುಕೊಳ್ಳುವ ತಾಳ್ಮೆ ಇದೆ. ಇವನ ಭಾವ ಮೈದುನ ವಿನಮಿ ಕ್ಷಾತ್ರತೇಜಸ್ಸನ್ನು ಅವಲಂಬಿಸಿ ಭೂಮಿಗೂ ಆಕಾಶಕ್ಕೂ ಏಕವಾಗಿ ರೊಚ್ಚೆಬ್ಬಿಸಿದವನು, ಭರತನ ಮಹಿಮೆಯಿಂದ ಹಲ್ಲು ಕಿತ್ತ ಹಾವಿನಂತಾಗಿ ತನ್ನ ತಂಗಿಯನ್ನು ಆತನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ಬೆಳೆಸುತ್ತಾನೆ. ಭರತನ ತಮ್ಮನಾದ ಬಾಹುಬಲಿಯೂ ಅಷ್ಟೆ. ತನ್ನ ಪರಾಕ್ರಮದ ಕೊಬ್ಬಿನಿಂದ ಇದಿರು ಬಿದ್ದರೂ ಅಣ್ಣನ ಸೂನೃತವಚನದ ಮಂತ್ರದಿಂದ ಕಣ್ದೆರೆದು ತನ್ನ ಕೋಪ ಮೋಹಗಳನ್ನು ಕೊಚ್ಚಿ ಮುಕ್ತಿ ಮಾರ್ಗವನ್ನು ಹಿಡಿಯುತ್ತಾನೆ. ಕಾವ್ಯದಲ್ಲಿ ಸುಳಿದುಹೋಗುವ ಇತರ ವ್ಯಕ್ತಿಗಳೆಲ್ಲರೂ ಭರತನ ಆಜ್ಞಾನುವರ್ತಿಗಳಾಗಿ ಅವನ ಸುಖವನ್ನು ಹೆಚ್ಚಿಸುವುದರಲ್ಲಿಯೇ ತಮ್ಮ ಜೀವನದ ಸಾರ್ಥಕ್ಯವನ್ನು ಪಡೆಯುತ್ತಿದ್ದವರು. ಎಲ್ಲರೂ ನಾಯಕನ ಔನ್ನತ್ಯವನ್ನು ಚಿತ್ರಿಸಲು ಸಹಾಯಕವಾದ ಹಿನ್ನಲೆಯಾಗಿದ್ದಾರೆ.

### ಕಾವ್ಯದಲ್ಲಿ ಅಂತರ್ಗತವಾಗಿರುವ ಸಾಮಾಜಿಕ ಚಿತ್ರ

ಕವಿಯು ತಾನು ಕಂಡು ಅನುಭವಿಸಿದ ಸುಂದರ ಸನ್ನಿವೇಶಗಳನ್ನು ಮನಸ್ಸಿನ ಮೂಲೆಯಲ್ಲಿ ರಾಶಿ ಹಾಕಿಕೊಂಡು ತನಗೆ ಬೇಕಾದಾಗ ಬೇಕಾ

ದುದನ್ನು ಬೈಲಿಗೆ ತರುತ್ತಾನೆ. ಹಾಗೆ ತರುವುದಕ್ಕೆ ಮುಂಚೆ ಅವುಗಳನ್ನು ತನ್ನ ಪ್ರತಿಭೆಯಿಂದ ಉಜ್ಜಿ ಉಜ್ವಲಗೊಳಿಸುತ್ತಾನೆ. ತನ್ನ ವಿದ್ವತ್ತಿನ ಅಡಿಗಲ್ಲಿನ ಮೇಲೆ ಅವುಗಳ ಅಂಕು ಡೊಂಕುಗಳನ್ನು ನೇರ ಮಾಡುತ್ತಾನೆ. ಜಾಣ್ಮೆಯಿಂದ ಅವುಗಳನ್ನು ಆದರ್ಶದ ಮೆರಗು ಹಾಕುತ್ತಾನೆ. ಆಗ ಅದು ಉತ್ತಮವಾದ ಕಾವ್ಯವಾಗುತ್ತದೆ. ರತ್ನಾಕರನು ತನ್ನ ಕಾವ್ಯರತ್ನದಲ್ಲಿ ತಂದಿರುವ ಹಲವು ಸುಂದರ ಸನ್ನಿವೇಶಗಳಿಗೆ ಅವನು ಕಂಡು ಅನುಭವಿಸಿದ ಕೆಲವು ಸಮಾಜ ಚಿತ್ರಗಳು ಕಣ್ಣೆದುರು ಕುಣಿಯುತ್ತಿದ್ದಿರಬೇಕು. ತಾನು ಸ್ವತಃರಾಜನ ಮಗ; ಬಹುಶಃ ಯಾವುದಾದರೊಂದು ಚಿಕ್ಕ ಸಂಸ್ಥಾನಕ್ಕೆ ರಾಜನಾಗಿದ್ದರೂ ಇದ್ದಿರಬಹುದು. ರಾಜಾಸ್ಥಾನದ ಕೆಲವು ಆಗುಹೋಗು ಗಳನ್ನಂತೂ ಅವನು ನೋಡಿರುವನೆಂಬುದು ನಿರ್ವಿವಾದ. ಅಲ್ಲಿಯ ಸಂಪತ್ತು, ಶೃಂಗಾರ, ವೈಭವ, ವೈಖರಿಗಳೆಲ್ಲವೂ ಹೆಪ್ಪುಗಟ್ಟಿ ಅವನ ಕಾವ್ಯ ದಲ್ಲಿ ಕುಳಿತಿವೆ. ಅವ್ಯಾಹತವಾಗಿ, ಅಸದೃಶ ಸಂಪತ್ತಿನಿಂದ ಕೂಡಿ, ಕನ್ನಡ ನಾಡಿನ ಕೀರ್ತಿಧ್ವಜವನ್ನು ದಿಗಂತವಿಶ್ರಾಂತವಾಗಿ ಹಬ್ಬಿ ಹರಿಸಿದ್ದ ವಿಜಯನಗರರಾಜ್ಯದ ವೈಭವವನ್ನು ಕವಿಯು ಕಣ್ಣಾರೆ ಕಂಡಿದ್ದನೆಂದು ತೋರುತ್ತದೆ. ಆ ರಾಜ್ಯದ ರಸಿಕರ ರಸಿಕತೆಗೆ ಕೊನೆಮೊದಲುಂಟೆ? ಅವರ ಭೋಗವೈಭವಕ್ಕೆ ಕೊರತೆಯುಂಟೆ? ಅವರ ಐಶ್ವರ್ಯಕ್ಕೆ ಎಲ್ಲೆಯುಂಟೆ? ಇವನ್ನು ಕಣ್ಣಾರೆ ಕಂಡು, ಮನವಾರೆ ತಣಿದು, ಹೊನಲಾಗಿ ಉಕ್ಕಿಸಿರು ವುದೇ ರತ್ನಾಕರನ 'ಭರತೇಶವೈಭವ' ವೆಂದು ತೋರುತ್ತದೆ.

ಸ್ತ್ರೀ ಪಾತ್ರಗಳನ್ನು ಚಿತ್ರಿಸುವಾಗ ಸಮಾಜದಲ್ಲಿ, ಸಂಸಾರದಲ್ಲಿ ಅವರ ಸ್ಥಾನವೇನು ಎಂಬುದನ್ನು ಕವಿಯು ನಮಗೆ ತೋರಿಸುತ್ತಾನೆ. ಸ್ತ್ರೀಯು ಬರಿಯ ಉಪಭೋಗವಸ್ತುವಷ್ಟೇ ಅಲ್ಲ. ಆಕೆಗೂ ಒಂದು ಆತ್ಮ ವಿದೆ. ಆ ಆತ್ಮವನ್ನು ಸಂತೋಷಗೊಳಿಸುವುದು ಪುರುಷನ ಧರ್ಮ. ಹೆಂಗಸು ಕಲಾಜೀವಿಯಾದರೆ ಗಂಡನನ್ನು ಸಂತೋಷಪಡಿಸುತ್ತಾಳೆ. ಅದ ಕ್ಕಾಗಿ ಪುರುಷನು ಅವಳಿಗೆ ತಕ್ಕ ಪರಿಕರಗಳನ್ನೂ ಅನುಕೂಲ್ಯಗಳನ್ನೂ ಒದಗಿಸಿ ಅವಳ ಜೀವನವನ್ನು ಪರಿಪೂರ್ಣವಾಗಿ ಮಾಡಬೇಕು. ಭರತನು ಇಂತಹ ಅನುಕೂಲ್ಯಗಳನ್ನೆಲ್ಲಾ ತನ್ನ ಹೆಂಡಿರಿಗೆ ಒದಗಿಸಿದ್ದನು. ಅವನ ಹೆಂಡಿರೆಲ್ಲರೂ ಪಂಡಿತೆಯ ಸಹಾಯದಿಂದ ಕಾವ್ಯಾಲಂಕಾರಗಳನ್ನು ತಿಳಿದ

ವರು. ಅವರಲ್ಲಿ ಹಲವರು ಅನೇಕ ಕಲೆಗಳಲ್ಲಿ ಪ್ರತ್ಯುತ್ಪನ್ನಮತಿಗಳಾಗಿದ್ದಾರೆ. ಕುಸುಮಾಜಿಯು ಕಾವ್ಯಕಲೆಯಲ್ಲಿಯೂ ವೀಣಾವಾದನದಲ್ಲಿಯೂ ಅತ್ಯಂತ ಚತುರೆ. ಪದ್ಮನಿಯೇ ಮೊದಲಾದ ಹಲವು ಸ್ತ್ರೀಯರು ನಾಟ್ಯ ವಿದ್ಯೆಯಲ್ಲಿಯೂ ಅಭಿನಯ ವಿದ್ಯೆಯಲ್ಲಿಯೂ ಅದ್ವಿತೀಯ ಚತುರೆಯರಾಗಿದ್ದಾರೆ. ಸಂಗೀತ, ನಾಟ್ಯ, ಅಭಿನಯಗಳು ಅವರಿಗೆ ಕರತಲಾಮಲಕವಾಗಿವೆ. ಸಂಗೀತಕ್ಕೆ ಇವರಿಂದ, ಇವರಿಗೆ ಸಂಗೀತದಿಂದ ಪ್ರಾಶಸ್ತ್ಯವು ಬೆಳೆದಿರುವುದೆಂಬಂತೆ ತೋರುತ್ತದೆ. ಇದರಿಂದ ಭರತನ ಜೀವನವು ಸುಖಭರಿತವಾಗಿದೆ.

## ರತ್ನಾಕರನ ವ್ಯಕ್ತಿತ್ವ

ರತ್ನಾಕರನ ಕವಿತಾಶಕ್ತಿಯನ್ನು ನೋಡಬೇಕಾದರೆ ಆತನು ಜಿನಸೇನಾದಿ ಇತರ ಕವಿಗಳ ಮಾರ್ಗನ್ನು ಬಿಟ್ಟು ತಾನೇ ಪ್ರತ್ಯೇಕವಾಗಿ ಮಾಡಿಕೊಂಡಿರುವ ಹೊಸ ಮಾರ್ಪಾಟನ್ನು ಗಮನಿಸಬೇಕು. ಇದು ಕಾಣಬರುವುದು ಮುಖ್ಯವಾಗಿ ಭೋಗ ಸಂಧಿಯಲ್ಲಿ. ಇದಲ್ಲದೆ ಕಾವ್ಯದಲ್ಲಿ ನಡುನಡುವೆ ಬರುವ ಹಲವು ವರ್ಣನೆಗಳು ನಾವು ನೋಡಲು ಯೋಗ್ಯವಾದುವು. ಅವು ಮೂಲದಲ್ಲಿಲ್ಲ; ರತ್ನಾಕರನ ಸ್ವಂತ ಆಸ್ತಿ.

ಮಹಾ ಕಾವ್ಯದಲ್ಲಿ ಅಷ್ಟಾದಶವರ್ಣನೆಗಳಿರಬೇಕೆಂಬ ಸ್ವರ್ಣಶೃಂಖಲೆಗೆ ಪಂಪನಂತಹ ಮಹಾ ಕವಿಯೂ ಒಳಗಾಗಿದ್ದಾನೆ. ಜಿನಸೇನನ ಕಾವ್ಯದಲ್ಲಿ ಇಲ್ಲದಿದ್ದರೂ ಪಂಪನು ತನ್ನ ಗ್ರಂಥದಲ್ಲಿ (ಆದಿಪುರಾಣ) ಯುದ್ಧೋದ್ಯೋಗಕ್ಕೆ ಮುನ್ನ ಜಲಕೇಳಿ, ವನವಿಹಾರ ಇತ್ಯಾದಿ ವರ್ಣನೆಗಳನ್ನು ಎಳತಂದಿದ್ದಾನೆ. ಕೆಲವುವೇಳೆ ಇವುಗಳಿಗೆ ಔಚಿತ್ಯವನ್ನು ಕಲ್ಪಿಸುವುದು ಕೂಡ ಕಷ್ಟವಾಗುತ್ತದೆ. ರತ್ನಾಕರನ ಮನಸ್ಸಿಗೆ ಈ ಔಚಿತ್ಯದ ಕೊಲೆಯು ಸರಿಹೋಗಲಿಲ್ಲವೆಂದು ತೋರುತ್ತದೆ. "ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ ರಚಿಸುವರಾನಂತು ಪೇಳೆ, ಉಚಿತಕ್ಕೆ ತಕ್ಕಷ್ಟು ಪೇಳ್ವೆ ಸಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ" ಎಂದು ಘಂಟಾಘೋಷವಾಗಿ ಹೇಳುತ್ತಾನೆ. ತನ್ನ ಗ್ರಂಥಗಳಲ್ಲಿ ವರ್ಣನೆಗಳೇ ಇಲ್ಲವೆಂದಲ್ಲ. ವರ್ಣನೆಗಳು ಸ್ವಾಭಾವಿಕವಾಗಿವೆ. ಬಲವಂತದಿಂದ ಮಾಘ ಸ್ನಾನ ಮಾಡಿಸಲು ಅವುಗಳನ್ನು ಎಳೆದು ತಂದಿಲ್ಲ. ಇತರ ಕವಿಗಳಂತೆ ಈತನು ಸಮುದ್ರ

ವರ್ಣನೆ ನಗರವರ್ಣನೆಗಳಿಂದ ಕಾವ್ಯವನ್ನು ಪ್ರಾರಂಭಿಸುವುದಿಲ್ಲ.

ಕವಿಯು ಗ್ರಂಥವನ್ನು ಬರೆಯುತ್ತಿರುವುದು ಜನರು ಅದನ್ನು ಓದಿ ರಸಾಸ್ವಾದನೆ ಮಾಡಿ ಸಂತೋಷಪಡಲೆಂದೇ ಹೊರತು ವಿದ್ವಜ್ಜನ ಗೋಷ್ಠಿಯಲ್ಲಿ ಬಿರುದು ಬಾವುಟಗಳನ್ನು ಸಂಪಾದಿಸುವುದಕ್ಕಲ್ಲ. ಮನಸ್ಸುಮಾಡಿದ್ದರೆ ತಾನೂ ಓದುಗಬ್ಬವನ್ನು ಬರೆಯಬಲ್ಲ. ಆದರೆ ತನ್ನ ಗ್ರಂಥವು ಕಬ್ಬಿನಂತಿರಬೇಕೇ ಹೊರತು ಬಿದಿರಂತೆ ಆಗಬಾರದೆಂದು ಆಶೆ. ಅದಕ್ಕಾಗಿ 'ಹಾಡು ಗಬ್ಬ' ವನ್ನು ರಚಿಸಿದ್ದಾನೆ. ತನ್ನ ಗ್ರಂಥವನ್ನು ಓದಿದರೆ 'ಅಯ್ಯಯ್ಯ ಚೆನ್ನಾದುದು' ಎಂದು ಕನ್ನಡಿಗರು ಹೇಳುವರಷ್ಟೇ ಅಲ್ಲ; ಅದನ್ನು ಅರ್ಥ ಮಾಡಿಕೊಂಡು ತೆಲುಗರು 'ರಯ್ಯಾ ಮಂಚಿದಿ' ಎಂದೂ ತುಳುವರು 'ಅಯ್ಯಯ್ಯ ಎಂಚಪೊಲಾಂಡು' ಎಂದೂ ಹೇಳುವಷ್ಟು ಸುಲಲಿತವಾಗಿರಬೇಕು, ತನ್ನ ಕಾವ್ಯ. ಅದಕ್ಕಾಗಿ 'ರಳ, ಕುಳ, ಶಿಥಿಲ, ಸಮಾಸ' ಮುಂತಾದವುಗಳ 'ಕೋಟಲೆಯು' ತನ್ನ ಗ್ರಂಥದಲ್ಲಿಲ್ಲವೆಂದೂ ಸಕಲ ಲಕ್ಷಣಗಳನ್ನು ತರಬೇಕೆಂಬ ಬಿರುದಿಗೆ ಬಿದ್ದು ತನ್ನ ಕಾವ್ಯವನ್ನು ಬಿರುಸು ಮಾಡಿ 'ಪುಸ್ತಕದ ಬದನೆಕಾಯಿ' ಯಾಗಿ ಮಾಡಲು ತನಗೆ ಇಷ್ಟವಿಲ್ಲವೆಂದೂ ಹೇಳಿಕೊಂಡಿದ್ದಾನೆ.

ಹೀಗೆ ರತ್ನಾಕರನು ಸ್ವತಂತ್ರ ಮಾರ್ಗಾವಲಂಬಿ; ಔಚಿತ್ಯ ನಿಯಮ ಪಾಲಕ; ಇತರ ನಿಯಮಗಳ ಕಟ್ಟುಪಾಡುಗಳಿಂದ ಸ್ವತಂತ್ರವಾಗಿರತಕ್ಕವನು. ಆರಂಭದಲ್ಲಿಯೇ ಇವನದೊಂದು ಹೊಸಮಾರ್ಗವಿದೆ. ವರ್ಣನೆಗಾಗಿ ವರ್ಣನೆಯಿಲ್ಲ, ಕಥೆಗಾಗಿ ವರ್ಣನೆಯಿದೆ. ವರ್ಣನೆಯಿಂದ ಕಥೆ ಮುಂದುವರಿಯುತ್ತದೆ.

ರತ್ನಾಕರನು ಶೃಂಗಾರ ರಸವನ್ನು ಚಿತ್ರಿಸಿರುವ ಬಗೆಯು ಇತರ ಎಲ್ಲ ಕವಿಗಳ ಮಾರ್ಗದಿಂದ ಬಹಳ ಭಿನ್ನವಾಗಿದೆ. ಈತನು ಶೃಂಗಾರರಸದ ಪ್ರತಿಪಾದನೆಯಲ್ಲಿ ತನ್ನ ಜೀವನ ತತ್ವವನ್ನು ಬೋಧಿಸ ಹೊರಟಿದ್ದಾನೆ. ಕವಿಯು ತತ್ವಜ್ಞನೂ ಆಗಿರುತ್ತಾನೆ. ಇತರ ಜೈನ ಕವಿಗಳು ಹೇಳುವಂತೆ ಈ ಪ್ರಪಂಚದ ಕ್ಷಣಭಂಗುರತೆಯನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದರೂ ದೂರದ ಫಲಗಳನ್ನು ನೆನೆದು ಕೈಲಿರುವುದನ್ನು ಎಸೆಯುವುದು ಹುಚ್ಚುತನ. ಇಲ್ಲಿನ ಸುಖವನ್ನು ನಿರ್ದುಷ್ಟ ರೀತಿಯಲ್ಲಿ ಸಾಧ್ಯವಾದಷ್ಟು ಸವಿದು

ಪರಮ ಸುಖದ ಕಡೆಗೆ ಕೈನೀಡೋಣ ಎಂಬುದು ಇವನ ತತ್ವ.

ತನು ರೂಪ ವಿಭವ ಯೌವನ
ಧನ ಸೌಭಾಗ್ಯಾಯುರಾದಿಗಳ್ಗೆ ಕುಡು ಮಿಂ।
ಚಿನ ಪೊಳಪು ಮುಗಿಲ ನೆಳಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬಿ ಪರ್ಬಿದ ಭೋಗಂ ॥

ಎಂಬ ನಿರಾಶಾವಾವನ್ನು ರತ್ನಾಕರನು ಖಂಡಿಸಿ ಯೋಗ ಭೋಗಗಳ ಸಾಮರಸ್ಯ ತತ್ವವನ್ನು ಧೈರ್ಯದಿಂದ ಓದುಗರ ಮುಂದಿಡುತ್ತಾನೆ. ಇವನ ಮಾತುಗಳು ಗಿಳಿಯ ಮಾತುಗಳಲ್ಲ. ಅವನಿಗೆ ಜೀವನವು ತಮಾಷೆಯಲ್ಲ. ಪರೀಕ್ಷೆಯಿಂದ, ದೀರ್ಘಾಲೋಚನೆಯಿಂದ ಅದರ ಯೋಗ್ಯತೆಯನ್ನು ಕಂಡುಹಿಡಿದು, ಅದನ್ನು ತನ್ನ ಕಥೆಯ ಮೂಲಕ ಲೋಕದಲ್ಲಿ ಹರಹಿ ಲೋಕ ಕಲ್ಯಾಣ ಮಾಡಿದ್ದಾನೆ. ಹೀಗೆ ಈತನು ಧೈರ್ಯದಿಂದ ಹೊರಕ್ಕೆ ತಂದಿರುವ ಜೀವನತತ್ವದಿಂದ ತನ್ನ ಮಹತ್ತನ್ನು ಮತ್ತಷ್ಟು ಹೆಚ್ಚಿಸಿಕೊಂಡಿದ್ದಾನೆ.

## ರತ್ನಾಕರನ ಶೃಂಗಾರ ಚಿತ್ರಗಳು.

ಈ ಕವಿಯು ಶೃಂಗಾರ-ಕವಿ-ಹಂಸರಾಜನೆಂಬ ತನ್ನ ಬಿರುದನ್ನು ಸಾರ್ಥಕಗೊಳಿಸಿಕೊಳ್ಳುವಂತೆ ಶೃಂಗಾರ ಚಿತ್ರಗಳನ್ನು ರಂಗುಗೊಳಿಸಿದ್ದಾನೆ. ಕಾವ್ಯದಲ್ಲಿ ಮೊದಲಿನಿಂದ ಕಡೆಯುವರೆವಿಗೂ ನೂರಾರು ಶೃಂಗಾರ ಸನ್ನಿವೇಶಗಳು ಮೇಲೆ ಮೇಲೆ ಬರುತ್ತಿದ್ದರೂ ಎಲ್ಲಿಯೂ ಅವುಗಳು ಜುಗುಪ್ಸಾವಹವಾಗಿಲ್ಲ; ಎಲ್ಲಿಯೂ ಮಿತಿಯನ್ನೂ ಮೀರಿಲ್ಲ. ಎಲ್ಲಿಯಾದರೂ ಕವಿಯ ರಸಾವೇಶವು ಔಚಿತ್ಯದ ಎಲ್ಲೆಯನ್ನು ದಾಟುವಂತೆ ಕಂಡುಬಂದರೆ ಒಡನೆಯೇ ಕವಿಯು ಅವುಗಳನ್ನು ಹೇಳಿಯೂ ಹೇಳದವನಂತೆ ನಟನೆ ಮಾಡಿ ನಿಂದೆಯಿಂದ ಪಾರಾಗುತ್ತಾನೆ.

ಭರತಚಕ್ರವರ್ತಿಗೆ ಕುಸುಮಾಜಿಯಲ್ಲಿ ಅಪಾರವಾದ ಮೋಹ, ಅವಳೊಡನೆ ಸುಖ ಸಂಕಥಾ ವಿನೋದದಲ್ಲಿರಬೇಕೆಂದು ನಿಶ್ಚಯಿಸಿರುತ್ತಾನೆ. ಕುಸುಮಾಜಿಯ ತಂಗಿ ಮಕರಂದಾಜಿಯು ರಾಜನನ್ನು ಭೋಜನಕ್ಕಾಗಿ ಆಹ್ವಾನಿಸಲು ಬಂದು 'ಅನುಕೂಲವಾದುದಾರೋಗಣೆಗಿನ್ನೆಮ್ಮ ಮನೆಗೇಳು ಭಾವಾಜಿ' ಎಂದು ಕರೆದಳು. ಮಕರಂದಾಜಿಯು ಇನ್ನೇನು ವರ್ಷ

ಆರು ತಿಂಗಳೆಂಬ ಹೊತ್ತಿಗೆ ಪ್ರಾಯದ ಹೊಸ್ತಿಲನ್ನು ಮೆಟ್ಟತಕ್ಕ ಸುಂದರ ಳಾದ ಹುಡುಗಿ ; ರಸಜೀವಿಯಾದ ಭರತನಿಗೆ ಅವಳೊಡನೆ ಸ್ವಲ್ಪ ಸರಸ ಮಾಡಬೇಕೆಂಬ ಚಪಲ. 'ಎಮ್ಮ ಮನೆಗೆ' ಎಂದು ಹೇಳಿದುದನ್ನೇ ನೆಪ ಮಾಡಿಕೊಂಡು "ಇಂದಾದು ನಿನ್ನ ಮನೆಗೆ ಬಹುದುಚಿತವೆ ? ಒಂದರೆ ವರುಷದ ಮೇಲೆ ಬಂದು ನೀನೆನ್ನ ಕರೆದರಾನು ಬಹೆನು...."ಎಂದು ಸ್ವಲ್ಪ ಹಾಸ್ಯ ಮಾಡಿದ. ಷಟ್ಖಂಡ ಚಕ್ರವರ್ತಿಯೆಂಬ ಗೌರವದಿಂದ ಅವಳು ಆದಕ್ಕೆ ತಕ್ಕ ಪ್ರತ್ಯುತ್ತರಕೊಡದೆ "ಅದಕ್ಕಾಜಿಯರಮನೆಗೇಳೆಂದೆ" ಎಂದು ಮಾತ್ರ ಹೇಳಿದಳು. ಅವಳು ಅತ್ಯಂತ ಚದುರೆಯೆಂಬುದು ರಾಜನಿಗೆ ಗೊತ್ತು. ಆದ್ದರಿಂದ ಅವಳನ್ನು ಅಷ್ಟಕ್ಕೆ ಸುಮ್ಮನಾಗಲು ಬಿಡದೆ "ಠಕ್ಕು ಕಾತಿಯೆ ನಿನ್ನ ಮನೆಗೆಂದೆಯೈಸೆ ; ನಿನ್ನಕ್ಕನ ಹೆಸರ ಹೇಳಿದೆಯು?" ಎಂದು ಪ್ರಶ್ನಿಸಿದನು. ಇಷ್ಟು ಸಾಕು ಮಕರಂದಾಜಿಯನ್ನು ರೇಗಿಸುವುದಕ್ಕೆ. ವಾಗ್ಯುದ್ಧಕ್ಕೆ ಅನುವಾಗಿ—

ಮಕರಂದಾಜಿ : "ಅಕ್ಕನ ಹೆಸರ ಹೇಳುವರಾಕೆ ಷಡೆದರೆ
ಮಕ್ಕಳು ಪೇಳ್ವುವು ಮುಂದೆ ।
ದಿಕ್ಕನೊಳೆನಗೇನು ಸಂಬಂಧ ಸಾಕೇಳು
ಸಿಕ್ಕಿನ ಮಾತನಾಡದಿರು ॥"

ಭರತ : "ಸಾಕೇಳು ಸಲಹೇಳು ನೀನೆಂದು ತಾನೆನ್ನ
ಸಾಕರುಷಣ ಮಾಡುತಹಳೆ ।
ಈಕೆ ತಾನೇನು ಕಾತರೆಯೊ !"

ಮಕರಂದಾಜಿ : ಕಾತರ ಗೀತರವನು ನೀವು ನಿಮ್ಮಂಬು
ಜಾತಾಕ್ಷಿಯರು ಬಲ್ಲಿರೈಸೆ ।
ಆ ತಳ್ಳಿ ಬಳ್ಳಿಯ ನಾವೇನು ಬಲ್ಲೆವು
ಮಾತು ಸಾಕಿನ್ನೇಳು ಭಾವ ॥

ರಾಜನು ತನ್ನ ದಫ್ತರವನ್ನು ಕೊಡವಿ ಕಟ್ಟಬೇಕಾದುದೇ ! ಎದ್ದು ಅವಳನ್ನು ಹಿಂಬಾಲಿಸುವನು. ಅರಸಿಯ ಮನೆಯನ್ನು ಪ್ರವೇಶಿಸುತ್ತಿರು ವಾಗಲೇ ಮಕರಂದಾಜಿಯಿಂದ ಓದು ಕಲಿತಿರುವ ಗಿಳಿ ಅವನಿಗೆ ಸುಖಾಗ ಮನವನ್ನು ಬಯಸಿತು.

"ಕ್ಷೇಮವೆ ಭಾವಾಜಿ ಮತ್ತು ನಿಮಗೆ ಪರಿ
ಣಾಮವೆ ಹೇಳು ಭಾವಾಜಿ।
ಈ ಮನೆಯತ್ತಲೇಕಡಿಗಡಿಗೆಯ್ತರೆ ?"

"ಧರೆಯನಾಳಿದನೆಂಬ ಗರ್ವವೊ ನಮ್ಮಕ್ಕ
ನರಮನೆಗಡಿಗಡಿಗೇಕೆ।
ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನ ಕಾ
ಲ್ಗುರುಲನಿಕ್ಕುವೆ ॥"

"ಸುಳಿಗುರುಳೆಂಬುದುಲುಂಟು ನಮ್ಮಕ್ಕನ
ನಳಿ ತೋಳ ಪಾಶಗಳುಂಟು।
ಹೊಳೆದಿನ್ನು ಹೋಹ ಭಾವನ ಕಾಣ್ಬೆ"

"ಸೋಂಕಿ ನಮ್ಮಕ್ಕನೊತ್ತಿನೊಳಿದ್ದರಿರು ವಿಾರಿ
ಭೋಂಕನೆ ಪೋಪೆ ನೆಂಬಾಗ।
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬಳ್ಳಿ
ಸಂಕಲೆಗಳನಿಕ್ಕಿಸುವೆನು ॥"

ಇದನ್ನು ಹೇಳಿಕೊಟ್ಟ ಮಕರಂದಾಜಿಗೆ ರಾಜನಿಂದ ತಕ್ಕ ಸನ್ಮಾನವು ದೊರೆಯಿತು. ಆತನು ಅವಳನ್ನು ಬಿಗಿಯಪ್ಪಿ ಮುತ್ತಿಕ್ಕುವನು. ಮಾತಿಗೆ ಮಾತನ್ನು ಪೋಣಿಸುವ ವೈಯಾರಿ ಮಕರಂದೆಯು ಅದರಿಂದ ಕೋಪಿಸಿದವಳಂತೆ ನಟಿಸಿ ತನ್ನ ಭಾವೀ ಪತಿಯಾದ ಭರತನೊಡನೆ ಬೇಕಾದಷ್ಟು ವಾಗ್ಯುದ್ಧವನ್ನು ನಡೆಸಿ ಅವನನ್ನು ಮೆಚ್ಚಿಸುವಳು. ಈ ಭಾಗವು ಅತ್ಯಂತ ಸರಸವಾದುದು. ಸರಸಸಂಧಿಯೆಂದು ಈ ಭಾಗಕ್ಕಿಟ್ಟಿರುವ ಹೆಸರು ಸಾರ್ಥಕವಾಗಿದೆ.

ಮುಂದೆ ರಾಜನು ಕುಸುಮಾಜಿಗೆ ಸನ್ಮಾನ ಮಾಡುವುದೂ ಅತ್ಯಂತ ಶೃಂಗಾರಮಯ ಚಿತ್ರ. ಗಂಡಹೆಂಡಿರಿಬ್ಬರೇ ಇರುವಾಗ ಆತನು ತನ್ನ ಹೆಂಡತಿಯನ್ನು ಎಷ್ಟು ವಿಧವಾಗಿ ಕರೆದರೂ ತೃಪ್ತಿಯಿಲ್ಲ. ಕುಸುಮಾಜಿಯೆಂಬ ಹೆಸರೇ ಮುದ್ದಾದುದು. ಮುದ್ದಾದ ಹೆಸರನ್ನು ಮತ್ತಷ್ಟು ಮುದ್ದಾಗಿಮಾಡಿ, ಅವಳ ಮನೆಯು ಅಚ್ಚುಕಟ್ಟನೆಲ್ಲಾ ಮೆಚ್ಚುವ ಸೋಗಿನಿಂದ ಅವಳನ್ನು ಹೆಸರಿಸುತ್ತಾನೆ.

"ಸಾರಣೆ ಚೆನ್ನಾಯ್ತು ಕುಸುಮೆ, ಕುಂಕುಮದೊಂದು
ಸಾರಣೆ ಚೆನ್ನಾಯ್ತು ಕುಸುಮಿ।
ತೋರಣ ಚೆನ್ನಾಯ್ತು ಕುಸುಮು"

"ಚಳಿಯಗೊಟ್ಟುದು ಲೇಸು ಕುಸುಮಾಜಿ, ಹೊಸ ರಂಗು
ವಲಿ ಲೇಸು ಕುಸುಮಾಂಗಿ, ನಿನ್ನ।
ನಿಳಯದ ಸಿಂಗಾರ ಸೊಗಸಾಯ್ತು ಕುಸುಮ ಕೋ
ಮಲೆ............॥"

ಹೀಗೆ ಕುಸುಮು, ಕುಸುಮಿ, ಕುಸುಮಾಜಿ, ಕುಸುಮೆ, ಕುಸುಮಾಂಗಿ, ಕುಸುಮಾಲೆ, ಕುಸುಮಿತಿ, ಕುಸುಮಿನಿ, ಎಂದು ಅವಳ ಹಿಂದೆಯೇ ಓಡಾಡುತ್ತಿರುವನೋ ಎನ್ನಿಸುವುದು.

ಅನಂತರ ಅವಳು ತಾನೇ ತನ್ನಾಣ್ಮನಿಗೆ ಕೈಮುಟ್ಟಿ ಬಡಿಸುವಳು. ಇಬ್ಬರೂ ಊಟಮಾಡಿದಮೇಲೆ ಶಯ್ಯಾಗೃಹದಲ್ಲಿ ಏಕತಲ್ಪದಮೇಲೆ ಸರಸವಾಡುತ್ತಾ ಕುಳಿತಿರುವರು. ರಾಜನು ತನ್ನ ಮನದನ್ನೆಯು ಒಳಗೆ ಬಂದುದನ್ನು ಕಂಡು ಮುಸುಕಿನೊಳಗಿಂದಲೇ "ಕುಸುಮಿ ತಾನೇಕೆ ಬಂದಳು?" ಎಂದು ಮಾತನಾಡಿಸುವನು. ಮತ್ತೊಬ್ಬರ ಎದುರಿನಲ್ಲಿ ಮೂಕಿಯಂತೆ ಕಾಣುವ ಕುಸಮಾಜಿಯು ಏಕಾಂತ ಗೃಹದಲ್ಲಿ ತಾನೆಷ್ಟು ರಸಿಕಳೆಂಬುನನ್ನು ತೋರುವಂತೆ ನಸುನಗುತ್ತಾ "ಏಕೆ ಬಂದಳೋ ದೇವರೇ ಬಲ್ಲರಸಿಯುಳಿಚ್ಛೆಯ" ಎಂದು ಉತ್ತರ ಕೊಡುವಳು. ಜಗಳಕ್ಕೆ ಬಂದಿರುವಂತೆ ಕಾಣುವುದಲ್ಲ? ಎಂದು ರಾಜನು ಪ್ರಶ್ನಿಸಿದರೆ, ಜಗಳಕ್ಕಲ್ಲವಂತೆ: ಏನೋ ಗೂಢಾರ್ಥವನ್ನು ತನ್ನ ಆಣ್ಮನೊಡನೆ ಆಲೋಚಿಸಲು ಬಂದಿರುವಳಂತೆ—ಎಂದು ಸವಿನುಡಿಯನ್ನು ನುಡಿಯುವಳು.

ಸರಸ ವಿನೋದಗಳಿಂದಲೂ ಭೋಗಭಾಗ್ಯಗಳಿಂದಲೂ ತಣಿದ ಮೇಲೆ ಕುಸುಮಾಜಿಯು ತನ್ನ ಗಾನಸುಧೆಯಿಂದ ರಾಜನನ್ನು ತಣಿಸುವಳು. ಕೇಳಿದಷ್ಟೂ ಕೇಳಬೇಕೆಂಬಾಸೆ ರಾಜನಿಗೆ. ಅವನು ಹೊಗಳಿದಷ್ಟೂ ರಾಗರಸಕ್ಕೆ ಕಳೆಯೇರುತ್ತಿದೆ. ರಾಗರಸವು ಕಳೆಯೇರಿದಷ್ಟೂ ರಾಜನ ಉತ್ಸಾಹವು ಹೆಚ್ಚುತ್ತಿದೆ. ಒಡನೆಯೇ ಅವಳನ್ನು ತಬ್ಬಿಕೊಂಡು ತನ್ನ ಮನಸ್ಸನ್ನು ತೃಪ್ತಿಪಡಿಸಬೇಕೆಂಬಾಸೆ. ಮೆಲ್ಲಗೆ ವೀಣೆಯನ್ನು ಸ್ವಲ್ಪ

ಸರಿಸುವನು. ಆದರೂ ಗಾನಸೆರಕ್ಕೆ ಮನಸೋತು, ನಡುನಡುವೆ ಒಮ್ಮೊಮ್ಮೆ

" ಮಡದಿ ಹಾಡುವುದೊಂದು ಗಮಕಕೆ ಗಾನದ
ಕುಡುಸವಿಗೆದೆಯೊಳು ಓಗ್ಗಿ ।
ಎಡದ ತೋಳಿಂದ ಕೊರಳನಪ್ಪಿ ಚೆಂದುಟ
ವಿಡಿದು ಚುಂಬಿಸಿ ನಕ್ಕು ಬಿಡುವಾ ॥ "

ಇಂತಹ ಸುಂದರವಾದ ನಿರ್ದುಷ್ಟ ಶೃಂಗಾರಚಿತ್ರಗಳು ಕನ್ನಡಕಾವ್ಯ ಪ್ರಪಂಚದಲ್ಲಿ ಹೇಳಿಕೊಳ್ಳುವಷ್ಟು ಹೆಚ್ಚಾಗಿ ಇಲ್ಲ. ರತ್ನಾಕರನ ಕಲಾ ಭವನದಲ್ಲಿ ಮಾತ್ರ ಇವುಗಳು ತಂಡ ತಂಡವಾಗಿ ಕಂಡುಬರುತ್ತವೆ.

## ರತ್ನಾಕರನ ಶೈಲಿ.

ಕವಿಯು ತನ್ನ ಕಾವ್ಯವನ್ನು ಪಂಡಿತರಂಜನೆಗಾಗಿ ಬರೆದಿಲ್ಲ. ಸ್ತ್ರೀಯರು ಮನೆಯಲ್ಲಿ ಹಾಡಿಕೊಳ್ಳಲು ಅನುಕೂಲವಾಗುವಂತೆ ಸಾಂಗತ್ಯ ದಲ್ಲಿ ಬರೆದಿದ್ದಾನೆ, ಹೊನ್ನಮ್ಮನು ' ಹದಿಬದೆಯ ಧರ್ಮ ' ವನ್ನು ಬರೆದಿರು ವಂತೆ. ಸಾಂಗತ್ಯವು ಸ್ತ್ರೀಯರಿಗೆ ಇತರ ಎಲ್ಲಾ ರೀತಿಗಿಂತಲೂ ಹೆಚ್ಚು ಸಹಜವಾದದು.

" The style expresses tbe man " ಎಂದು ಹೇಳುವುದುಂಟು. ಹಾಗೆಯೇ "ಶೀಲಸ್ಯ ಇಯಂ ಶೈಲೀ" ಎಂದು ಹೇಳುತ್ತಾರೆ. ಕವಿಯ ಶೈಲಿಯಿಂದ ಅವನ ಮನೋಧರ್ಮವನ್ನು ನಾವು ಸುಲಭವಾಗಿ ಗ್ರಹಿಸ ಬಹುದು. ರತ್ನಾಕರನ ಶೈಲಿಯಿಂದ ಅವನ ಮನೋಭಾವವೇನೆಂಬುದನ್ನು ನಾವು ಕಂಡುಕೊಳ್ಳಬಹುದು. ಕಣ್ಣಿಗೆ ಕಾಣುವ ವಸ್ತುಗಳನ್ನು ವರ್ಣಿ ಸಲು ಹೆಚ್ಚು ಜಾಣತನ ಬೇಕಿಲ್ಲ. ಅದರ ಅನುಭವವು ವೇದ್ಯವಾಗಲು ಹೆಚ್ಚು ಕಷ್ಟವಾಗುವುದಿಲ್ಲ. ರತ್ನಾಕರನ ಶೈಲಿಯು ಸುಲಭವಾಗಿದೆ; ಸ್ವಾಭಾವಿಕವಾಗಿದೆ. ಇರುವ ವಸ್ತುವನ್ನು ಅದು ಇರುವ ಹಾಗೆ ವರ್ಣಿ ಸುವ ಚಾತುರ್ಯ ಕವಿಗೆ ಉಂಟು. ಹಾಗೆ ವರ್ಣಿಸುವಾಗ ಜನಸಾಮಾನ್ಯರ ಅನುಭವದಲ್ಲಿರುವ ಹೋಲಿಕೆಗಳನ್ನು ತರುವುದರಲ್ಲಿ ಬಹು ಜಾಣತನವನ್ನು ತೋರಿದ್ದಾನೆ. ಉದಾಹರಣೆಗೆ ಮಳೆಯ ವರ್ಣನೆಯನ್ನು ನೋಡಿ ! "ಕಿರು ಧಾರೆಯಲ್ಲ : ತೆಂಗಿನ ಮರಗಳ ತೋರದುರುವ ಧಾರೆಯೊಳಿಡಬಿಡದೆ"

ಬರುತ್ತಿತ್ತು, ಮಳೆ. “ಅಗಣಿತ ದೈವಗಳೊಂದು ಹಬ್ಬವ ಮಾಡಲಗಲದೊಳ್ ನೆರೆದೊತ್ತಲಾಗಿ ; ಗಗನವೆಂದೆಂಬ ಸೇವಗೆಯೊರಳಿಂದ ಸೇವಗೆ ಇಳಿವೊಲು ಮಳೆಯಾಯ್ತು.” ಹಾಗೆಯೇ ಗುಡುಗನ್ನು ವರ್ಣಿಸುವಾಗ “ಕೊಡದ ಸಾಲಂದದ ಮುಗಿಲ ಕಾಮನ ಬಿಲ್ಲಬಡಿಗೆಯಿಂ ಬಡಿಯೆ ದೈವಗಳು ; ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊಟ್ಟಿಡುವಂತೆ ಕರೆದುದು ವೃಷ್ಟಿ.” ಈ ಕವಿಗೆ ನಿಜವಾದ ಅನುಭವವಿತ್ತು : ಚಿತ್ರಬರೆದಂತೆ ಕಣ್ಣಿಗೆ ಕಟ್ಟುವ ಕೌಶಲವಿತ್ತು.

ಕಣ್ಣಿಗೆ ಕಾಣಿಸದ, ಕಿವಿಯಿಂದ ಮಾತ್ರ ಕೇಳಬಲ್ಲ ವಸ್ತುಗಳಲ್ಲಿಯೂ ಅಷ್ಟೆ. ಇವನ ಸಂಗೀತವರ್ಣನೆ ಅಸ್ವಾದ್ಯರಶವಾದುದು. ಅಲ್ಲಿ ಪಾರಿಭಾಷಿಕ ಶಬ್ದಗಳ ಗೊಂದಲವಿಲ್ಲ. ಸಂಗೀತಶಾಸ್ತ್ರದ ಗಂಧವಿಲ್ಲದವನಿಗೂ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ತಾನು ಅನುಭವಿಸಿ ಆ ಕವಿಯು ಆನಂದಪಟ್ಟಿದ್ದಾನೆ. ಆ ಆನಂದವನ್ನು ನಿರ್ವಂಚನೆಯಿಂದ ಓದುಗರ ಪಾಲುಮಾಡುತ್ತಾನೆ. ಅಲ್ಲಿಯ ಉಪಮಾನಗಳಂತೂ ಜೀವನದಿಂದ ತಾವಾಗಿಯೇ ಎದ್ದು ಬಂದಿರುವಂತೆ ಕಾಣುತ್ತವೆ.

ಒಳಗುಣ್ಮಿದಾನಂದರಸ ತನ್ನ ತನು ತುಂಬಿ
ತುಳುಕಿ ಹೊರಗೆ ಸೂಸುವಂತೆ ।
ತೆಳುವಸುರಿಂದ ಬಾಯ್ದೆರೆಯೊಳು ಸುಸ್ವರ
ಹೊಳೆದು ಮೋಹಿಸುತಿದ್ದುದಾಗ ॥

ಸುಳಿನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆ
ದೊಳಗೊರಲೊಳು ಪ್ರಾಯ ವಡದು ।
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ
ಗಿಳಿದು ಮೋಹಿಸಿದುದಾಳಾಪ ॥

ಬೆಳಗಿನೊಳೊಲಾಡುವಂತೆ ಸಂಗೀತದ
ಸುಳಿಯೊಳು ತೇಲಾಡುವಂತೆ ।
ತೆಳುಗಾಳಿಯೇರಿ ವೈಹಾಳಿಯ ಮಾಡುವಂ
ತೆಳವೆಂಗಳರಸಿ ಹಾಡಿದಳು ॥

ಕೆಂಬಾಯ ನಸುದೆರೆದಾಯೆಂದು ರಾಗವ
ನಂಬುಜಾನನೆತುಡುಕಿನಳು ।
...........॥

ವೀಣೆಯನುಡಿಸುತ ಪಾಡಿದರವಳೀಗ
ವೀಣೆಗಳೆರಡನೊಂದಾಗಿ ।
ಹೂಣೆ ನುಡಿಸುತಿದ್ದಳೆಂಬೊಲಿಹುದು ಮರ್ಝು
ರಾಣಿಯ ದನಿಯ ಚಲ್ವಿಕೆಯೆ ॥

ಎಷ್ಟು ಕಣ್ಣಿಗೆ ಕಟ್ಟಿದಂತಿದೆ ಸಂಗೀತದ ದೃಶ್ಯ. ಹೀಗೆಯೇ ನರ್ತನವೂ. ನಾಟ್ಯಕಾತಿಯರು ನಾಟ್ಯವಾಡುತ್ತಾ

ನೋಟದೊಳಗೆ ಕೊಂದರೊಮ್ಮೆ ನೋಟಕರನು
ನಾಟಿಸಿ ನಸುನಗೆಯಿಂದ ।
ಲೂಟಮಾಡಿದರು ಮೆಯ್ಯೊಲೆದಾಟದಿಂದೆದೆ
ಗೋಟೆಯ ಕೊಂಡರೇನೆಂಬೆ ॥

ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ
ಜಳಧಿಯ ಸುಳಿಯೋ ಎಂಬಂತೆ ।
ಬಲಕೆಡಕೊಲೆದು ತಾ ಹರಿದೆಳವಿಸಿಲಲ್ಲಿ
ಎಳನಾಗ ಹರಿವಂತೆ ಮುರಿದು ॥

ಅತ್ಯಂತ ಗಹನವಾದ ವೇಂದಾತ ವಿಚಾರಗಳೂ ಕೂಡ ರತ್ನಾಕರನ ಕೈಲಿ ಸುಲಿದು ಬಾಳೆಯ ಹಣ್ಣಿನಂತೆ ಸುಲಭವಾಗಿ ಬಿಡುತ್ತವೆ.

ದೊರೆಯಿದ್ದು ಹೋಗೆನೆ ಹೋಗಿ, ಬಾರೆಂದರೆ
ಬರುತಿಹ ಸೇವಕರಂತೆ ।
ಕರಣನಾಲ್ಕಿಂದ್ರಿಯವೈದವನುಸಿರಿದಂ
ತಿರುತಿಹವೇನ ಬಣ್ಣಿಪೆನು ॥

ಬೇಕಾದರಾಡಿಸಿ ಗಾಳಿಪಟವನರ್ತಿ
ಸಾಕಾಗೆ ಸುರುಳುವನಂತೆ ।
ನೂಕಿ ಚಿತ್ತವ ಹೊರಗಾಡಿಸುವನು ; ತನ್ನೊ
ಳೇಕವಾಗಿರಿಸುವನೊಮ್ಮೆ ॥

ಹೆಣ್ಣು ಸೋಂಕದನುನ್ನ ಪುಟವೇರುತಿಹುದದ
ಹೆಣ್ಣ ತೋಳ್ಸಲೆಗೆ ಬಿದ್ದಾಗ।
ಪೊಣ್ಣ ಪೊಣ್ಣನೆ ಹಾರುವೆರಳೆ ಮೋಸದಿ ಕಾಲು
ಕಣ್ಣಿಗೆ ಸಿಲುಕಿದಂತಿಹುದು ॥

ಹೆಣ್ಣ ಹಿಡಿದ ಮೇಲೆ ಮಣ್ಣ ಹಿಡಿಯಬೇಕು
ಹೊನ್ನ ಹಿಡಿಯಬೇಕು ಸಹಜ।
ಹೆಣ್ಣು ಹೊನ್ನು ಮಣ್ಣು ಪಿಡಿದಾತ್ಮರೆಲ್ಲರು
ಮಣ್ಣು ಹಿಡಿದ ಲೋಹದಂತೆ ॥

ಹೀಗೆ ಕವಿಯು ಮನಸ್ಸಿಗೆ ಮಾತ್ರ ವೇದ್ಯವಾಗಬಲ್ಲ ವಿಷಯಗಳನ್ನು ಸಹ, ಸಹಜವಾಗಿ, ಸುಂದರವಾಗಿ, ಚಿತ್ರಿಸಬಲ್ಲ ಜಾಣನಾದ ಕಲೆಗಾರನಾಗಿದ್ದಾನೆ.

ಆದರೆ ರತ್ನಾಕರನು ಆಯ್ದುಕೊಂಡಿರುವ ವಸ್ತುವಿನಲ್ಲಿ ಹಲವು ಭಾವಾವೇಗಗಳು ಬರಲು ಆಸ್ಪದವಿಲ್ಲ. ಉಗ್ರಭಾವಗಳಿಗೆ ಇಲ್ಲಿ ಎಡೆಯಿಲ್ಲ. ಆದ್ದರಿಂದ ಇವನ ಶೈಲಿಯಲ್ಲಿ ಒಂದು ಸತ್ವವು ಕಡಮೆಯಾದಂತೆ ತೋರಿ ಬರುತ್ತದೆ. ನಾಗಚಂದ್ರನಂತೆ ಇವನಲ್ಲಿಯೂ ಭಾವಕ್ಕನುಗುಣವಾದ ಪದ ಸಮೂಹವು ಕಂಡುಬರುವುದಿಲ್ಲ. ಕವಿಯ ಮನೋಭಾವ ಬಹು ಕೋಮಲವಾದುದು. ಮನಸ್ಸನ್ನು ಕೆರಳಿಸಬಲ್ಲ—ಕೆಚ್ಚಿನ ಕಿಚ್ಚನ್ನು ಹೆಚ್ಚಿಸಬಲ್ಲ—ಉಗ್ರಭಾವಗಳು ಆವನಲ್ಲಿ ಕಡಮೆ. ಅವನ ದೃಷ್ಟಿ ಎಲ್ಲವೂ ಸುಂದರವಾದ, ಕೋಮಲವಾದ ಕಳಕಳಿಸುವ ಲಲಿತಕಲೆಯ ಕಡೆಗೆ.

ರತ್ನಾಕರನಲ್ಲಿ, ಅವನ ಶೈಲಿಯಲ್ಲಿ ಕುಸುರಿಗೆಲಸ ಹೆಚ್ಚು. ವರ್ಣನೀಯ ವಸ್ತುವಿನ ಪ್ರತಿಯೊಂದು ಪದರವನ್ನೂ ಜಕಣಾಚಾರಿಯಂತೆ ಬಿಚ್ಚಿತೋರಿಸುವ ಸ್ವಭಾವ. ಓದುಗರ ಊಹೆಗೆ ಹೆಚ್ಚು ಅವಕಾಶವನ್ನೇ ಕೊಡುವುದಿಲ್ಲ. ತಾನು ಹಿಡಿದ ಕೆಲಸದಲ್ಲಿ ಮತ್ತೊಬ್ಬರು ಕೈಹಾಕದಂತಿರಬೇಕೆಂಬುದು ಇವನ ಮನೋಧರ್ಮ. ಅವನ ಶೈಲಿಯಲ್ಲಿ ಉದ್ದಕ್ಕೂ ಇದು ಕಂಡುಬರುತ್ತದೆ.

ಇವನ ಶೈಲಿಯಲ್ಲಿ ಆಡಂಬರವಿಲ್ಲ. ಯಾವುದನ್ನು ಹೇಳಬೇಕಾದರೂ ಆಪರ ಉದ್ದಿಷ್ಟ ಪರಿಣಾಮವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಲು

ಪ್ರಯುತ್ನಿಸುತ್ತಾನೆ. ಒಂದು ರೀತಿಯಿಂದ ಮಿತಿಯೆಂಬುದು ಇವನ ಮನೆ ದೇವತೆ. ಆಯಾ ಸಂದರ್ಭಗಳಿಗೆ ಎಷ್ಟು ಪ್ರಕೃತವೋ ಅಷ್ಟು ಮಾತ್ರ ಹೇಳುತ್ತಾನೆ. ಸಂಗೀತದ ವಿಚಾರವನ್ನು ಎತ್ತಿದರೆ ಅದರಿಂದ ಬರುವ ಸಂತೋಷದ ವಿಚಾರವೆಷ್ಟೋ ಅಷ್ಟೇಹೊರತು ಒಂದು ಹೆಜ್ಜೆ ಆಚೆ ಈಚೆ ಇಡುವುದಿಲ್ಲ. ದೃಶ್ಯ ಒಂದನ್ನೇ ಬೇರ್ಪಡಿಸಿ ನೋಡಿದಾಗ ಅದು ಸಂಪೂರ್ಣವಾಗಿದ್ದಂತೆ ತೋರುತ್ತದೆ. "ಉಚಿತಕ್ಕೆ ತಕ್ಕಷ್ಟು ಪೇಳ್ವೆನ್" ಎಂಬ ಈತನ ಸಂಕಲ್ಪವು ಈಡೇರಿದೆ.

## ರತ್ನಾಕರನ ಉಪಮೆಗಳು.

ರತ್ನಾಕರನ ಉಪಮೆಗಳು ಮನಸ್ಸನ್ನು ಉದ್ರೇಕಿಸುವಷ್ಟು ಉಜ್ವಲ ವಾದವುಗಳಲ್ಲ. ಹೇಳುವುದನ್ನು ಮನದಟ್ಟಾಗುವಂತೆ ಹೇಳಲು ಮಾತ್ರ ಇವುಗಳು ಸಹಕಾರಿಯಾಗಿರುತ್ತವೆ. ಸಾಮಾನ್ಯವಾಗಿ ಪಾಠಕರ ಮನಸ್ಸಿಗೆ ಹಿಡಿಸುವಂತೆ ಮಾಡುವುದಕ್ಕಾಗಿ ಒಂದೇಬಾರಿಗೆ ಮೂರು ನಾಲ್ಕು ಉದಾಹರಣೆಗಳನ್ನು ಕೊಡುವುದಕ್ಕೂ ಕವಿಯು ಹಿಂಜರಿಯುವುದಿಲ್ಲ. ಎರಡು ಉದಾಹರಣಗಳಂತೂ ಎಲ್ಲಿಯೂ ತಪ್ಪುವುದಿಲ್ಲ. ಎಂದ ಮಾತ್ರಕ್ಕೆ ಈತನ ಉಪಮೆಗಳು ಕೀಳ್ತರದವುಗಳೆಂದು ಭಾವಿಸಬಾರದು. ಜನಸಾಮಾನ್ಯರ ಅನುಭವದೊಳಗೆ ಇರತಕ್ಕ ಉಪಮೆಗಳನ್ನೆಲ್ಲ ಆರಿಸಿ ತೆಗೆದು ಅವರ ಮುಂದಿಡಬೇಕೆಂದು ಅವನ ಉದ್ದೇಶ. ಸಮಯಬಂದಾಗ ಉತ್ತಮವಾದ ಉಪಮೆಗಳನ್ನು ಕೊಡುತ್ತಾನೆ. ನಾಟಕರಂಗದಲ್ಲಿ ತೆರೆಯು ಓರೆಯಾದುದನ್ನು ಕುರಿತು—

"ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ ।<br>
ಕಂಜಾಕ್ಷಿಯರು ಕಾಣಿಸಿದರು ॥

ಎಷ್ಟು ಸುಂದರವಾದ ಭಾವ ! ಪ್ರಕೃತಿಯಲ್ಲಿ ನಡೆವ ವ್ಯಾಪಾರಗಳನ್ನು ಕವಿಯು ಕಣ್ಣಿಟ್ಟು ನೋಡುವ ಶಕ್ತಿಯುಳ್ಳವನಾಗಿದ್ದಾನೆ. ನೈಸರ್ಗಿಕ ವಾದ ಇಂತಹ ಉಪಮೆಗಳು ಕಾವ್ಯದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಅತ್ಯುತ್ತಮ ಕಾವ್ಯಲಕ್ಷಣವುಳ್ಳ ಉಪಮೆಗಳು ಇಲ್ಲಿ ಅಲ್ಪ ಸಂಖ್ಯಾತವಾಗಿವೆ.

## ಸಾಹಿತ್ಯದಲ್ಲಿ ರತ್ನಾಕರನ ಸ್ಥಾನ.

ಕನ್ನಡ ಸಾಹಿತ್ಯ ಸಾಮ್ರಾಜ್ಯದಲ್ಲಿ ರತ್ನಾಕರನ ಸ್ಥಾನವಾವುದು

ಎಂಬುದನ್ನು ಒಂದೇ ಮಾತಿನಲ್ಲಿ ಹೀಗೆ ಹೇಳಬಹುದು. ಭಾಮಿನಿ ಷಟ್ಪದಿಗೆ ಕುಮಾರವ್ಯಾಸನು ಹೇಗೋ, ರಗಳೆಗಳಿಗೆ ಹರಿಹರನು ಹೇಗೋ ಸಾಂಗತ್ಯಕ್ಕೆ ರತ್ನಾಕರನು ಹಾಗೆ. ಅವನು ಕನ್ನಡ ಸಾಹಿತ್ಯ ಸಾಮ್ರಾಜ್ಯದ ಸ್ತಂಭಗಳಂತಿರುವ ಉತ್ತಮ ಕವಿಗಳ ಪಂಕ್ತಿಯಲ್ಲಿ ಅವರೊಡನೆ ಭುಜಕ್ಕೆ ಭುಜವಾನಿಸಿ ಕುಳಿತುಕೊಳ್ಳುವ ಯೋಗ್ಯತೆಯುಳ್ಳವನು; ತನ್ನ ಕಾವ್ಯರತ್ನದಿಂದ ಅಜರಾಮರವಾದ ಕೀರ್ತಿಯನ್ನು ಗಳಿಸಿರುವನು.

ಜಗದೊಳ್ ಸನ್ನಿದವಾದ ನಾಣ್ಣುಡಿಗಳಂ ಛಂದಕ್ಕೆ ಬರ್ಪಂತೆ ನೆ।
ಟ್ಟಗೆ ಮಾತಾಡುವ ಬಲ್ಮೆ ಚಿತ್ತದೊಳೊರಲ್ದಿರ್ದರ್ಥಮುಂ ಕೊಡೆ ನಾ॥
ಲಗೆಯಿಂ ರಂಜಿಸುವೊಂದು ಬಿನ್ನಣಮುದಿನ್ನಾವಂಗೆ ಪುಣ್ಯೈಕಭಾ।
ಗಿಗೆ ಸೈಪಿಂದೊರೆದೊಳ್ಗುಮಾತನೆ ವಲಂ ಶೃಂಗಾರ ರತ್ನಾಕರಂ॥

"ಕವಿಕಾಮ."

## ಅನುಬಂಧ

ಭರತೇಶವೈಭವದ ಕರ್ತೃ ಮೂಡಬಿದಿರೆಯವನೆಂಬುದಕ್ಕೆ ಕವಿಯ ಮಾತೇ ಆಧಾರವಾಗಿದೆ. ತ್ರಿಲೋಕಶತಕದ ೧೨೯ನೆಯ ವೃತ್ತದಲ್ಲಿ "ಮಣಿಶೈಲಂಗತಿಯಿಂದು ಶಾಲಿ ಶಕಕಾಲಂ ಸಂದಿರಲ್ ತೌಳವಾಂಗಣದೋಳ್ ವೇಣುಪುರಾಂಕದೊಳ್ ಸೃಜಿಸಿದಂ ರತ್ನಾಕರಾರ್ಯಂ" ಎಂದಿದೆ. ಇಲ್ಲಿ ಹೇಳಲ್ಪಟ್ಟ ವೇಣುಪುರವೇ ಮೂಡಬಿದಿರೆ.

ಈ ವೇಣುಪುರವೇ ಮೂಡಬಿದಿರೆ ಎಂಬುದು ಹೇಗೆ? ಮೂಡಬಿದಿರೆಯನ್ನು ಅಲ್ಲಿ ದೊರೆತಿರುವ ಶಾಸನಗಳಲ್ಲೆಲ್ಲಾ ವೇಣುಪುರವೆಂದೇ ಕರೆದಿರುತ್ತದೆ. ಮೂಡಬಿದಿರೆಯ "ಸಾವಿರಕಂಬದ ಬಸದಿ,"—"ಪೊಸ ಬಸದಿ,"—"ತ್ರಿಭುವನ ಚೂಡಾಮಣಿ"—ಎಂದು ಕರೆಯಲ್ಪಡುವ ಬಸದಿಯ ಒಂದು ಶಾಸನದಲ್ಲಿ "ಶಕನೃಪಕಾಲ ೧೩೫೧ನೆಯ ಸೌಮ್ಯ ಸಂವತ್ಸರದ ಮಾಘಶುದ್ಧ ಪಂಚಮಿ ಗುರುವಾರದಲ್ಲಿ ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾಲಯಮಂ ಪ್ರಾರಂಭಿಸಿ....ವೇಣುಪುರದ ಎಂಟುಪ್ರಜೆ ಸೆಟ್ಟಿಗಾರರು ....ದೇವರಾಯ ಮಹಾರಾಯರ ನಿರೂಪದಿಂ ಅಭಿನವ ಚಾರುಕೀರ್ತಿ ಪಂಡಿತ ದೇವರುಗಳಿಗೆ ನಿರ್ಮಾಣಾರ್ಥವಾಗಿ ಕೋಟೀಶ್ವರದಲ್ಲಿ ಪಾಲಿಕೆನಾಡು ಚೌಟರು ಮುಖ್ಯವಾದ ಅರುವರು ಬಲ್ಲಾಳುಗಳ ಸಹಾಯದಿಂ

ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾಲಯಮಂ ಜಗದಾಶ್ಚರ್ಯ ಮಪ್ಪಂತು ಮಾಡಿಸಿದರ್" ಎಂದೂ ಇನ್ನೊಂದು ಶಾಸನದಲ್ಲಿ "....ಆ ಮೂಡ ಬಿದಿರೆಯ ಹಕರು ತ್ರಿಭುವನ ಚೂಡಾಮಣಿ ಚೈತ್ಯಾಲಯಕ್ಕೆ ಶ್ರೀ ಚಂದ್ರಪ್ರಭ ತೀರ್ಥೇಶ್ವರರ ಪರಮೋದಾರಿತ ದಿವ್ಯ ಮೂರ್ತಿಯಂ.... ನಿರ್ಮಲಿಸಿದರ್" ಎಂದೂ ಇದೆ. ಮೂಡಬಿದಿರೆ, ವೇಣುಪುರ ಈ ಎರಡು ಹೆಸರುಗಳೂ ಸಮಾನವಾಗಿ ಬಳಕೆಯಲ್ಲಿದ್ದವು.



ಬೇರೊಂದು ಶಾಸನದಲ್ಲಿರುವ—

"ಪುರುಹೂತೋರು ಪುರಾಭ ವೇಣುಪುರದೊಳ್ ಭವ್ಯರ್ ಪಲರ್ ಮಾಡಿಸಲ್ ।
ವರಚಂದ್ರಪ್ರಭಗೇಹಮಂತ್ರಿಭುವನೀ ಚೂಡಾಮಣೀಖ್ಯಾತಮಂ ॥
ಭರದಿಂ ಮಾಡಿಸಿದಂ ತೃತೀಯ ನಿಲಯಕ್ಕಾ ಚೈತ್ಯಗೇಹಾಗ್ರದೊಳ್ ।
ಕರಚಲ್ವಾಗಿರೆ ತಾನ್ಮುದಿಂ ಪೊದಕೆಯಂ ಶ್ರೀ ಭೈರವಕ್ಷ್ಮಾವರಂ ॥"

ಎಂಬ ವೃತ್ತದಲ್ಲಿ ಮೂಡಬಿದಿರೆಯನ್ನು ವೇಣುಪುರವೆಂದೇ ಕರೆದಿರುತ್ತದೆ.

ಇದೆಲ್ಲ ಸರಿಯೇ; ಆದರೂ ವೇಣುಪುರವೆಂಬುದು ವೇಣೂರು ಏತಕ್ಕಾಗಬಾರದು? ಎಂಬ ಸಂಶಯವು ಕೆಲವರಿಗೆ ಬರಬಹುದು. ಆದರೆ ವೇಣೂರು ಎಂದು ಈಗ ಕರೆಯಲ್ಪಡುವ, ಅಜಿಲರ ರಾಜಧಾನಿಯಾದ, ಗೋಮಟೇಶ್ವರನ ಪ್ರತಿಮೆಯೊಂದಿದ್ದು ಪ್ರಸಿದ್ಧವಾಗಿರುವ ಊರಿನ ಹೆಸರು ನಿಜವಾಗಿ ಏಣೂರು—ವೇಣೂರು ಅಲ್ಲ. ಇಲ್ಲಿ ಎರಡೂರು, ಮೂರೂರು, ನಾಕೂರು, ಐದೂರು, ಆರೂರು, ಏಣೂರು, ಎಣ್ಮೂರು ಎಂಬ ಗ್ರಾಮಗಳಿವೆ. ಆದ ಪ್ರಯುಕ್ತ 'ಭರತೇಶವೈಭವ'ದ ಕರ್ತೃವು ಹೇಳುವ ವೇಣುಪುರವು, ಮೂಡಬಿದಿರೆಯೇ ಹೊರತು (ವೇಣೂರು) ಏಣೂರು ಅಲ್ಲ. ಈ ಭಾಗದಲ್ಲಿ ದೇವಚಂದ್ರನ ಹೇಳಿಕೆಯನ್ನು ಸರಿಯೆಂದು ಹೇಳಬಹುದು.

ಉ. ಮಂಗೇಶರಾವ್.







# ಭರತೇಶ್ವರಚರಿತೆ

## ಆಸ್ಥಾನಸಂಧಿ

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯ ।
ಕಿರಣ ಸುಜ್ಞಾನಪ್ರಕಾಶ ॥
ಸುರರ ಮಕುಟಮಣಿರಂಜಿತಚರಣಾಬ್ಜ ।
ಶರಣಾಗು ಪ್ರಥಮ ಜಿನೇಶ ॥ ೧ ॥

ಸಿದ್ಧರ ಸೆತತ ವಿಶುದ್ಧರ ಬೋಧಸ ।
ಮೃದ್ಧರ ನೆನೆದು ಸಾನೀಗ ॥
ಸಿದ್ಧರಸದೊಳು ಲೋಹವನದ್ದಿದಂತಾತ್ಮ ।
ಸಿದ್ಧಿಯ ಪಡೆವೆನಿನ್ನೇನು ॥ ೨ ॥

ವ್ಯವಹಾರ ನಿಶ್ಚಯವರಿದು ತಮ್ಮಾತ್ಮತ !
ತ್ವವ ನೆಮ್ಮಿ ನಿಜವ ಸಾಧಿಸುವಾ ॥
ನವಕೋಟಿ ಮುನಿಗಳು ಮೂವರಿಲ್ಲೆನಲುಂ ।
ಟವರಡಿಗಳಿಗೆರಗುವೆನು ॥ ೩ ॥

ಪರಬೊಮ್ಮ ತ್ರಿಭುವನಸಾರ ಚಿದಂಬರ ।
ಪುರುಷ ನಿರಂಜನಸಿದ್ಧಾ ॥
ದುರಿತಂಜಯ ಹಂಸನಾಥ ನಮೋ ನಮೋ ।
ಗುರುವೆ ಪ್ರತ್ಯಕ್ಷವಾಗೆನಗೆ ॥ ೪ ॥

ಬಿನ್ನಹ ಗುರುವೇ ಧ್ಯಾನಕೆ ಬೇಸರಾದಾಗ ।
ನಿನ್ನನಾದಿಯಮಾಡಿಕೊಂಡು ॥
ಕನ್ನಡದೊಳಗೊಂದು ಕಥೆಯ ಪೇಳುವೆನದು ।
ನಿನ್ನಾಜ್ಞೆ ಕಂಡಾ ನನ್ನೊಡೆಯಾ ॥ ೫ ॥

ಕಬ್ಬಿಗರೋದುಗಬ್ಬವ ಹಾಡುಗಬ್ಬವ ।
ಕಬ್ಬದೊಳೊರೆವರಿವೆರಡು ॥
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ ।
ಕಬ್ಬ ಹೇಳೆಲೆ ಸರಸ್ವತಿಯೆ ॥ ೬ ॥

ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ।
ರಯ್ಯಾವುಂಚಿದಿಯೆನೆ ತೆಲುಗಾ ॥
ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು ।
ಮೆಯ್ಯುಬ್ಬಿ ಕೇಳಬೇಕಣ್ಣಾ ॥ ೭ ॥

ರಳಕುಳ ಶಿಥಿಲಸಮಾಸ ಮುಂತಾದವ ।
ರೊಳಗಿಲ್ಲಿ ಕೆಲವುಳ್ಳರುಂಟು ॥
ಕೆಲವಿಲ್ಲಾದರುವಿಲ್ಲವೇಕೆಂದರವರ ಕೋ ।
ಟಲೆಯೇಕೆ ಹಾಡುಗಬ್ಬದೊಳು ॥ ೮ ॥

ಸಕಲಲಕ್ಷಣವು ವಸ್ತುಕಕೆ ವರ್ಣಕಕಿಷ್ಟು ।
ವಿಕಳವಾದರು ದೋಷವಿಲ್ಲ ॥
ಸಕಲಲಕ್ಷಣಕಾಗಿ ಬಿರುಸುಮಾಡಿದರೆ ಪು ।
ಸ್ತಕದ ಬದನೆಕಾಯಹುದು ॥ ೯ ॥

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು ।
ಕಂದಿಕುಂದಿಹುದೋ ನಿರ್ಮಲವೊ ॥
ಸಂಧಿಸಿ ಶಬ್ದದೋಷಗಳೊಮ್ಮೆ ಸುಕಥೆಗೆ ।
ಬಂದರೆ ಧರ್ಮ ಮಾಸುವುದೇ ॥ ೧೦ ॥

ಕೇಳಿರೊ ಭವ್ಯರು ನಿಮಗೊಂದು ಸುಕಥೆಯ ।
ಹೇಳುವೆನತಿ ಮೃದುವಾಗಿ ॥
ಕೇಳಿದಿರಾದರೆ ನಿಮಗಾತ್ಮಸುಖವಿಂದು ।
ನಾಳೆನಾಡಿದಿನೊಳಗಹುದು ॥ ೧೧ ॥

ಶ್ರೀ ಭರತೇಶವೈಭವವಿದು ಕೇಳಿರೊ ।
ಸೌಭಾಗ್ಯವಹುದಡಿಗಡಿಗೆ ॥
ಶೋಭನವಹುದಿಂದ್ರಪದವಿಯಹುದ ಮೋಕ್ಷ ।
ಲಾಭವಹುದು ಕಟ್ಟಕಡೆಗೆ ॥ ೧೨ ॥

ಗಣನೆಯಿಲ್ಲದ ರಾಜ್ಯಸುಖದೊಳೋಲಾಡಿ ಧಾ ।
ರಿಣಿ ಮೆಚ್ಚೆ ಜಿನಯೋಗಿಯಾಗಿ ॥
ಕ್ಷಣಕೆ ಕರ್ಮವಸುಟ್ಟು ಜಿನನಾದ ಭೂಭುಜಾ ।
ಗ್ರಣಿಯ ವೈಭವವ ಲಾಲಿಸಿರೊ ॥ ೧೩ ॥

ಆಗಮವಧ್ಯಾತ್ಮವಳವಟ್ಟು ಶೃಂಗಾರ ।
ತ್ಯಾಗಭೋಗದ ಮೋಡಿ ಮೆರೆಯೆ ।
ಭೋಗಿಯೋಗಿಗಳಿದೆ ಜುಮ್ಮುಜುಮ್ಮೆನೆ ನೇಮ ।
ದಾಗಿ ಸೋಲ್ಲಿಸುವೆನಾಲಿಸಿರೊ ॥ ೧೪ ॥

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ ।
ರಚಿಸುವರಾನಂತು ಪೇಳೆ ॥
ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ ।
ನಿಚಿತಪ್ರಯೋಜನವೆನಗೆ ॥ ೧೫ ॥

ಕೃತಿಯ ಪೇಳ್ವಾತ ಸಾಮಾನ್ಯನಹುದು ಕಾವ್ಯ ।
ಪತಿ ಚಕ್ರಿ ಸಾಮಾನ್ಯನಲ್ಲ ॥
ಕೃತಿಗಾದಿನಾಥನ ಕೂರ್ತುಕೇಳ್ವುದು ಕಾವ್ಯ ।
ಕೃತನ ದೋಷವ ನೋಡಬೇಡ ॥ ೧೬ ॥

ಈ ಪುಣ್ಯಕಥೆ ಪುಣ್ಯಜೀವಿಗಳಿಗೆ ಮೆಚ್ಚು ।
ಕಾಪುರುಷರಿಗೆ ಮೆಚ್ಚಲ್ಲ ॥
ಪಾಪವಕೆಡಿಸಿ ಪುಣ್ಯವಮಾಡಿ ಸ್ವರ್ಗಕೆ ।
ಪೋಪೆವೆಂಬವರೆಲ್ಲ ಕೇಳಿ ॥ ೧೭ ॥

ಓಂನಮುಯೆನ್ನಿ ಜಿನಂನಮುಯೆನ್ನಿ ಸಿ ।
ದ್ಧಂನಮೋ ಹಂಸಂನಮಾಮಿ ॥
ಎನ್ನಿ ಹಾಗೆಂದವೋಲೀ ಕಥೆಗಿಚ್ಛಾಮಿ ।
ಯೆನ್ನಿ ಚೆನ್ನಾಗಿನ್ನು ಕೇಳಿ ॥ ೧೮ ॥

ಭರತಭೂತಳಕೆ ಸಿಂಗಾರವಾದಯೋಧ್ಯಾ ।
ಪುರದೊಳು ಮೂಲೋಕ ಪೊಗಳೆ ॥
ಭರತಚಕ್ರೇಶ್ವರ ಸುಖಬಾಳುತಿರ್ದನಾ ।
ಸಿರಿಯನಿನ್ನೇನ ಬಣ್ಣಿಪೆನು ॥ ೧೯ ॥

ಪುರುಪರಮೇಶನ ಹಿರಿಯಕುಮಾರನು ।
ನರಲೋಕಕೊಬ್ಬನೆ ರಾಯು ॥
ಮುರಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ ।
ಭರತ ಚಕ್ರಿಯ ಹೇಳಲಳವೇ ॥ ೨೦ ॥

ಹದಿನಾರನೆಯ ಮನು ಪ್ರಥಮ ಚಕ್ರೇಶ್ವರ ।
ಸುದತಿಜನಕೆ ರಾಜಮದನ ॥
ಚದುರರತಲಿವಣಿ ತದ್ಭವಮೋಕ್ಷಸಂ ।
ಪದನ ಬಣ್ಣಿಸಲೆನ್ನ ಹವಣೆ ॥ ೨೧ ॥

ಹೊಲ್ಲದನ್ನಪರಿಗಿಲ್ಲದ ಗುಣಗಳನ್ನಿಟ್ಟು ।
ಸೊಲ್ಲಿಪ ಕೃತಿಮಾರ್ಗವಲ್ಲ ॥
ಉಳ್ಳಸದ್ಗುಣಗಳ ಕಡೆಗಂಡು ಬಣ್ಣಿಸ ।
ಬಲ್ಲವನಾವನಾ ನೃಪನಾ ॥ ೨೨ ॥

ಹಲವುಮಾತೇನೊಂದ ಪೇಳ್ವೆನಾ ಕ್ಷತ್ರಿಯ ।
ಕುಲರತ್ನಗಾಹಾರವುಂಟು ॥
ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ।
ಬಳಿಕೆಗಾರರ ಪೇಳ್ವ ತೆರನೆ ॥ ೨೩ ॥

ಧರೆಯೊಳಿಲ್ಲವ ಸುಟ್ಟರುಂಟಲ್ಲಿ ಭಸ್ಮ ಕ ।
ರ್ಪುರವ ಸುಟ್ಟರೆ ಭಸ್ಮವುಂಟೆ ॥
ನರತತಿಗಾಹಾರನಿಹಾರವುಂಟೆಮ್ಮ ।
ಭರತೇಶಗಿಲ್ಲ ನಿಹಾರಾ ॥ ೨೪ ॥

ಕೋಮಲಾಂಗನು ಹೇಮವರ್ಣನು ಜಗವೆಲ್ಲ ।
ಕಾಮಿಸೆತಕ್ಕ ಚೆನ್ನಿಗನು ॥
ಆಮೋದವುಕ್ಕುವ ಜವ್ವನಿಗನು ಸರ್ವ ।
ಭೂಮೀಶರೊಡೆಯನಾ ಚಕ್ರಿ ॥ ೨೫ ॥

ಆ ವಿಭುವೊಂದಿನದುದಯದೊಳೆದ್ದು ।
ದೇವತಾರ್ಚನೆಯನು ಮಾಡಿ ॥
ಚಾವಡಿಗೈದಿ ತಾನೋಲಗವಾದೊಂದು ।
ಶ್ರೀವಿಲಾಸವನೇನನೆಂಬೆ ॥ ೨೬ ॥

ನವರತ್ನ ಹೇಮನಿರ್ಮಿತವೆನಿಪಾಸ್ಥಾನ ।
ಭವನದೊಳಾ ರಾಜರತ್ನ ॥
ಛವಿವಡೆದೆಸೆದನು ರತ್ನಪುಷ್ಪಕದೊಳು ।
ದಿವಿಜೇಂದ್ರನೊಪ್ಪವಂದದೊಳು ॥ ೨೭ ॥

ಸಿಂಗರಿಸಿದ ಝಲ್ಲಿಪಟ್ಟೆಪೂಮಾಲೆ ಬೆ ।
ಡಂಗಾದ ಮಂಟಪದಲ್ಲಿ ॥
ಶೃಂಗಾರವನದೊಳು ಮೆರೆವ ವಸಂತರಾ ।
ಜಂಗಣೆಯಾದನಾ ಸೊಬಗಾ ॥ ೨೮ ॥

ತನುಕಾಂತಿ ತುಂಬಿದ ಸಭೆಯೆಂಬ ಕೊಳದಲ್ಲಿ ।
ಕನಕಸಿಂಹಾಸನವೆಂಬ ॥
ಕನಕಾಂಬುಜದ ಮೇಲಾ ರಾಜ(ಹಂಸ)ನಿ ।
ದ್ದನು ರಾಜಹಂಸನೆಂಬಂತೆ ॥ ೨೯ ॥

ಉದಯಗಿರಿಯಮೇಲೆ ಮೆರೆವ ಭಾನುವಿಗೆ ಮು ।
ತ್ತಿದಿರಾದ ಪ್ರತಿಸೂರ್ಯನಂತೆ ॥
ಪದುಳದುತ್ತುಂಗ ಸಿಂಹಾಸನವೇರಿ ದೇ ।
ಹದ ಕಾಂತಿ ಮೆರೆಯೆ ಮೆರೆದನು ॥ ೩೦ ॥

ಆವ ಬಿಂಕವೊ ಎಡಗಾಲ ಗದ್ದುಗೆಯ ಮೇ ।
ಲೋವಿ ಮಡಿದು ಮತ್ತೆ ಕೆಳಗೆ ॥
ಹಾವುಗೆಯೊಳು ಪೆಂಡೆಯದ ಬಲಗಾಲೂರಿ ।
ಠೀವಿಯೊಳೆಸೆದನಾ ರಾಯಾ ॥ ೩೧ ॥

ಬಲಗೈಯೊಳಾಂತ ಹೊನ್ನೊರೆಯ ಕಠಾರಿಯ ।
ಕೆಲಕೂರಿ ಮತ್ತೆಡಗೈಯಾ ॥
ಮಲಗಿನ ಮೇಲೂರಿ ಬೀರಸಿರಿಯನಾಳ್ದ ।
ಕಲಿಗಳದೇವನೊಪ್ಪಿದನು ॥ ೩೨ ॥

ನುರುಸುಯ್ಯ ಗಾಳಿಗೆ ತೇಲ್ವ ದುಕೂಲದ ।
ಸೆರಗುಸೇರುವೆ ದೊರೆಹೊದೆದು ॥
ತೆರಪಿನೆದೆಯ ಹೊನ್ನ ಜನ್ನಿವಾರದ ರೇಖೆ ।
ಮೆರೆಯೆ ರಾಜೇಂದ್ರ ಮೆರೆದನು ॥ ೩೩ ॥

ಮಿರುಪ ಕಿರೀಟವುಂಟದನಂದು ಧರಿಸಿತಿ ।
ಲ್ಲುರೆ ಮನದೊಂದು ಲೀಲೆಯೊಳು ॥
ತುರುಬು ಚುಂಗೆಸೆಯೆ ಚಿಮ್ಮುರಿಸುತ್ತಿ ಸೊಬಗನೆ ।
ಕರೆವುತ್ತಿದ್ದನು ನೋಡುವರಿಗೆ ॥ ೩೪ ॥

ಹೊಂಬಣ್ಣ ಮೈಗೆ ಮೋಹಿಸುವ ಕಾಗಿನಘಟ್ಟ ।
ತುಂಬಿದ ಕಸ್ತೂರಿತಿಲಕ ॥
ಮುಂಬಾಯ ಕರ್ಪೂರವೀಳೆಯದಿಂದ ಕ ।
ಣ್ಗೆಂಬಾದನಾ ಗಾಡಿಕಾರ ॥ ೩೫ ॥

ಸುಮನಸುಗಂಧ ಕದಂಬದ ಕಂಪನು ।
ತಿಮಿರಿ ತೆಗೆಯಲಾಗಿ ಸಭೆಗೆ ॥
ಘಮುಘಮಿಸುವ ದೇಹಪರಿಮಳದಿಂದೊಂದು ।
ಗಮಕದೊಳೆಸೆದನಾ ರಾಯಾ ॥ ೩೬ ॥

ನೋಡುವ ರೀವಿ ಹತ್ತೆಂಟಕೊಮ್ಮೊಮ್ಮೆ ಮಾ ।
ತಾಡುವ ನುಡಿಯ ವಿಡಾಯಾ ॥
ಪಾಡರಿದೋಲಗಗೊಟ್ಟಾಚೆ ಶಿರವನ ।
ಲ್ಲಾಡಿಸುತಿಹನು ನೋಳ್ಪವರಾ ॥ ೩೭ ॥

ಜೋಕೆಪಿಡಿದು ನೀಡುವೆಳೆಯ ಘಳಿಗೆಯ ಪ ।
ರಾಕಿನೊಳಗೆ ಕೈಕೊಳುತ ॥
ಏಕೆ ನುಡಿಯನೋ ಇನ್ನೊಮ್ಮೆ ಯೆಂಬಂತೊಂದು ।
ತೂಕದೊಳೆಸೆದನಾ ರಾಯಾ ॥ ೩೮ ॥

ಗಂಭೀರವೆಂಬುದು ಸರ್ವಗುಣಗಳೆಂಬ ।
ಅಂಭೋಧಿಯಾದಿಯಾಗಿಹುದು ॥
ಗಂಭೀರಬೇಕು ರಾಜಗು ರಾಜಯೋಗಿಗು ।
ಗಂಭೀರಕೆಟ್ಟರೇನುಂಟು ॥ ೩೯ ॥

ಉಬ್ಬಿಬೆಳೆದು ಬಾಗಿತಿಲ್ಲ ರೇಖೆಗೆ ಬಂದು ।
ಹುಬ್ಬಿನಂತೆಸೆವೆಳೆಮಿಾಸೆ ॥
ಹುಬ್ಬುಮಿಾಸೆಯ ನೋಡಿ ನಲಿವ ಬವರಿ ಕಣ್ಣ ।
ಹಬ್ಬವ ಮಾಳ್ಪನೆಲ್ಲರಿಗೆ ॥ ೪೦ ॥

ಕುಂಡಲಗಳ ಕಾಂತಿ ಕಂಗಳ ಪ್ರಭೆ ಗಂಡ ।
ಮಂಡಲದೊಳಗಾಡಲವನಾ ॥
ಮಂಡೆಯೊಲೆದರೆ ಹೆಂಗಳಿಗೆ ಮನ್ಮಥನದೊ ।
ಖಂಡೆಯಸಲುಗಿದಂತಿಹುದು ॥ ೪೧ ॥

ಆರು ಬಣ್ಣಿಪರವನಂಗದ ನಿರ್ಮಲಾ ।
ಕಾರವ ಕೊರಳೊಳಿಕ್ಕಿರ್ದಾ ॥
ತೋರವುತ್ತುಗಳೆಲ್ಲ ತಿಳಿಗೊಳದೊಳು ತೋರ್ಪ ।
ತಾರಾಳಿಯಂತೆ ತೋರಿದುವು ॥ ೪೨ ॥

ಪದಕ ಕಡಗ ಕಂಠಮಾಲೆಯ ನವರತ್ನ ।
ದುದಿತಾಂಶು ದೇಹಕಾಂತಿಯೊಳು ॥
ಪುದಿದು ಪೊಳೆಯೆ ಕಣ್ಗೆ ತೋರಿದನಿಂದ್ರಚಾ ।
ಪದೊಳು ಮಾಡಿದ ನೃಪನಂತೆ ॥ ೪೩ ॥

ಮಿಗೆ ತೋರಮುತ್ತಿನ ತೊಡಿಗೆಯೊಡನೆ ಧಗ ।
ಧಗಿಸುವ ಲಾವಣ್ಯದಿಂದ ॥
ಹಗಲು ನಕ್ಷತ್ರವೆರಸಿ ಪೂರ್ಣಚಂದ್ರಮ ।
ಸೊಗಸಿದಂತೆಸೆದನು ಚಿತ್ರಾ ॥ ೪೪ ॥

ಶಾಲಿಯ ತೆರೆಯ ತಟ್ಟುಚ್ಚಿ ದೀಪದಿಕಾಂತಿ ।
ಥಾಳಿಸುವಂತೆ ಲೋಕದೊಳು ॥
ಆ ಲಲಿತಾಂಗನ ತನುಕಾಂತಿ ಪೊದೆದ ದು ।
ಕೂಲದ ಹೊರಗೆ ರಂಜಿಸಿತು ॥ ೪೫ ॥

ಬಳಸಿನ ನುಡಿಗಳೇನೋಲಗದೆಳೆವೆಂಗ ।
ಳೊಲಿದುಟ್ಟ ಬಿಳಿಯ ಸೀರೆಗಳೊ ॥
ಚೆಲುವನ ತನುಕಾಂತಿ ಸೋಂಕಿದ ರಂಗು ಮಾ ।
ದಲವಣ್ಣವೆನಲೆಸೆದಿಹುದು ॥ ೪೬ ॥

ಕವಿತೆಯ ರಚನೆಯೆಂದೆನಲಾಗದೇಕೆಂದ ।
ರವನಾದಿಜಿನನ ಕುಮಾರಾ ॥
ಭವಭಂಜನನಂತ್ಯದೇಹಿಯಲ್ಲವೆ ಪೇಳ ।
ಲವನಿಗೀ ಕಾಂತಿ ವಿಸ್ಮಯವೇ ॥ ೪೭ ॥

ಕೀಟಕದೇಹಿಗೀ ಕಾಂತಿವಿಸ್ಮಯವೈಸೆ ।
ಮಾಟನಿಸುವ ವಜ್ರದೇಹಿ ॥
ಕೋಟಿಸೂರ್ಯರ ಕಾಂತಿಯನು ನಾಳೆ ಕ್ಷಣಿಕೆ ಸಂ ।
ಘಾಟದಿ ಕೊಂಬವಗರಿದೆ ॥ ೪೮ ॥

ಚಿತ್ರಿಸಬಾರದವನರೂಪು ಕರುವಿಟ್ಟು ।
ಸೂತ್ರಿಸಿಯೆರೆಯಲಶಕ್ಯ ॥
ನೇತ್ರಕೆ ಮನಕೆ ಗೋಚರವಲ್ಲದದು ವಾಕು ।
ಮಾತ್ರಕೆ ಗೋಚರವೈಸೆ ॥ ೪೯ ॥

ಹೆಂಗಳ ರೂಪು ಗಂಡಸಿಗೆ ಗಂಡರ ರೂಪು ।
ಹೆಂಗಳ ಸೋಲಿಪುದೆಂಬ ॥
ಪಾಂಗಲ್ಲವವನ ಚೆಲ್ವಿಕೆ ಗಂಡು ಪೆಣ್ಗಳ ।
ಕಂಗಳ ಸೆರೆವಿಡಿದಿಹುದು ॥ ೫೦ ॥

ನಿಟ್ಟಿಸಿದರೆ ಮುತ್ತಮುದುಕಿಗಾದರು ಜುಂಮು ।
ಥಟ್ಟಿಸುತಿಹುದು ರೂಪವನ ॥
ಬಟ್ಟಜವ್ವನೆಯರಂತಿಂತಾದರೆಂದು ಬಾ ।
ಯ್ಬಿಟ್ಟೆನ್ನು ನುಡಿಯಲದೇಕೆ ॥ ೫೧ ॥

ಅಂಗವಂಗಕೆ ತಕ್ಕ ಲಾವಣ್ಯ ಲಾವಣ್ಯ ।
ದಿಂಗಿತ ಪ್ರಾಯ ಪ್ರಾಯದೊಳು ॥
ಸಂಗಡಿಸಿದ ಸಿರಿಗಂಭೀರ ವಿಕ್ರಮ ।
ಶೃಂಗಾರಶೋಭೆಯೊಳೆಸೆದಾ ॥ ೫೨ ॥

ಆವ ನೋಂಪಿಯ ನೋಂತನೋ ಪೂರ್ವಭವದೊಳ ।
ದಾವ ಭಕ್ತಿಯೊಳಾದಿಜಿನನಾ ॥
ಭಾವಿಸಿವನೊ ಅಲ್ಲದಿದ್ದರಾ ನೃಪಗಂತು ।
ಲಾವಣ್ಯವಹುದೇ ಲೋಕದೊಳು ॥ ೫೩ ॥

ಹಲವೇನು ದೇಹ ಬೇರಾತ್ಮ ಬೇರೆಂದಾತ್ಮ ।
ಕಲೆಯ ಮುನ್ನೊಲ್ದು ಧ್ಯಾನಿಸಿದಾ ॥
ಫಲದಿಂದ ದೊರೆಕೊಂಡುದಾ ರಾಯಗಾ ರೂಪು ।
ಇಳೆಯೊಳೆಲ್ಲರಿಗೇಕೆ ಬಹುದು ॥ ೫೪ ॥

ನೋಡುವವರಿಗೆ ಕಣ್ಣಲಸಿಕೆಯಿಲ್ಲ ಕೊಂ ।
ಡಾಡುವವರಿಗಾಸರಿಲ್ಲ ॥
ನೋಡಿದನಿತಕೆ ಕೊಂಡಾಡಿದನಿತಕ್ಕಿಚ್ಚೆ ।
ಮಾಡುವ ಸೊಬಗಿನೊಳೆಸೆದಾ ॥ ೫೫ ॥

ಈ ರೂಪು ರೇಖೆ ಮತ್ತೀ ಗಾಡಿ ನೋಡಿ ಇಂ ।
ತೀ ರಾಯಗಲ್ಲದನ್ಯರಿಗೆ ॥
ಬಾರದು ಬಂದರೊಬ್ಬರಿಗೆ ನೆರೆಯದೆಂದು ।
ತೋರುತಿಹರು ತಮತಮಗೆ ॥ ೫೬ ॥

ತರತರವಿಡಿದು ಢಾಳಿಸುತಿಹ ದೀರ್ಘ ಚಾ ।
ಮರಗಳ ಸಾಲೊಳೆಸೆದನು ॥
ಹರಿವ ಬೆಳ್ಮುಗಿಲೊಳು ತೋರಿ ಮರಸುವ ಚಂ ।
ದಿರನೋ ಭಾಸ್ಕರನೋಯೆಂಬಂತೆ ॥ ೫೭ ॥

ಬಲದೊಳು ಭೂಭುಜರೆಡದಲ್ಲಿ ಗಣಿಕೆಯ ।
ರೋಲುಮೆಯ ಕವಿಗಳು ಮುಂದೆ ॥
ನಿಲೆ ಹಿಂದೆ ಹಿತವರು ಬಳಸಿದೆಕ್ಕಡಿಗರ ।
ಬಲು ಬಜಾವಣೆಯೊಳೊಪ್ಪಿದನು ॥ ೫೮ ॥

ಕೆಳೆಯರು ಸಚಿವರು ಸಾರಲಿದ್ದರು ದೃಷ್ಟಿ ।
ಸಲುವಷ್ಟರೊಳು ಮಂದಿಯಿಹುದು ॥
ಗಿಳಿಯರಸಂಚಿ ತಂಬೆಲರಿಂದು ಬಳಸಿ ಕಂ ।
ಗೊಳಿಸುವ ಮದನನಂತಿರ್ದಾ ॥ ೫೯ ॥

ಗಲಭೆ ಹೋ ನಿಲ್ಲು ಸಂಮುಖವಾಗು ಚಿತ್ತೈಸು ।
ತೊಲಗು ಲಾಲಿಸು ಕುಳ್ಳಿರೆಂದು ॥
ಸುಳಿವ ಕಟ್ಟೆಗೆಕಾರರಾಸ್ಥಾನದೊಳು ಕೋ ।
ಗಿಲೆಯಂತೆ ದನಿದೋರುತಿಹರು ॥ ೬೦ ॥

ಕಿಂಮೆನ ಬಾರದು ನಗಬಾರದತ್ತಿತ್ತ ।
ನೆಮ್ಮಬಾರದು ಸಭೆಯೊಳಗೆ ॥
ಸುಮ್ಮನಿರ್ದುದು ಜನ ಭರತಚಕ್ರೇಶನ ।
ಸೊಮ್ಮೆಲ್ಲವೇ ರಾಜವೋಡಿ ॥ ೬೧ ॥

ಕಲೆಯನರಿದು ಕಾಲವರಿದು ರಾಯನ ಮನ ।
ದೊಲವನರಿದು ಮತ್ತೆ ಪರರ ॥
ಒಳಗು ಹೊರಗನರಿದೊಯ್ಯನೆ ಕೆಲಬರು ।
ಸಲುಗೆವುಳ್ಳವರು ನುಡಿವರು ॥ ೬೨ ॥

ಮಂಡಳಿಕರ ವೊತ್ತ ರಾಜಕುಮಾರರ ।
ತಂಡ ಮಂತ್ರಿಗಳ ಕದಂಬ ॥
ಪಂಡಿತರೊಡ್ಡು ಗಾಯಕರ ಸಂತತಿ ಯೆಡೆ ।
ಗೊಂಡಿರ್ದುದೋಲಗದೊಳಗೆ ॥ ೬೩ ॥

ನಟ್ಟುವರಕ್ಕರಿಗರು ಭಯಕಾರರು ।
ಭಟ್ಟರು ವೈದ್ಯಜೋಯಿಸರು ॥
ಜಟ್ಟಿಗಳಂಕದಾಳುಗಳಿದ್ದರಲ್ಲಲ್ಲಿ ।
ಮಿಟ್ಟನೆ ಮಿಡುಕದೆ ನಿಂದು ॥ ೬೪ ॥

ಮಾವತಿಗಳು ಸಾಣಿಗಳು ಹೇರಿಗರು ಸೇನ ।
ಬೋವರು ಮಂತ್ರಜೀವಿಗಳು ॥
ರಾವುತರೆಕ್ಕಡಿಗರು ನಾಯಕರು ಬಹು ।
ಸೇವಕರಿರ್ದರಲ್ಲಲ್ಲಿ ॥ ೬೫ ॥

ವಾರನಾರಿಯರು ತಾವಾರನಾರಿಯರೊ ಶೃಂ ।
ಗಾರಕೆ ಸೋತು ಭೂವರನಾ ॥
ಹಾರುತ್ತಿದ್ದರು ಸುರಪಶುವ ಗೋದಾನಕ್ಕೆ ।
ಹಾರುವ ಹಾರುವನಂತೆ ॥ ೬೬ ॥

ಅಂಬುಜವೆಲ್ಲವು ರವಿಯನೋಳ್ಪಂತೆ ನೀ ।
ಲಾಂಬುಜ ನೋಳ್ಪಂತೆ ಶಶಿಯಾ ॥
ತುಂಬಿದ ಸಭೆಯೆಲ್ಲ ನೃಪನ ನೋಡುತ ಮಿಕ್ಕ ।
ಹಂಬಲ ಮರೆದುದಲ್ಲಲ್ಲಿ ॥ ೬೭ ॥

ನೋಡುತಿರ್ದರು ತನ್ನನೆಲ್ಲರು ತಾನಾಗ ।
ನೋಡಿದನೊಲ್ದು ಗಾಯಕರ ॥
ನೋಡಿದ ಬಗೆಯರಿದಾ ಜಾಣರಾಗಳೆ ।
ಹಾಡತೊಡಗಿದರೋಜೆಯೊಳು ॥ ೬೮ ॥

ರೋಮಾಂಚನಸಿದ್ಧ ಜುಂಜುಂಮಾಲಪ ಗಾ ।
ನಾಮೋದ ಚುಂಚು ಮಾಲಾದ್ಯ ॥
ಶ್ರೀಮಂತ್ರಗಾಂಧಾರ ರಾಗವರ್ತಕರೆಂಬ ।
ರಾ ಮಹೀಪತಿಯ ಗಾಯಕರು ॥ ೬೯ ॥

ಬಳ್ಳಬಾಯ್ದೆರೆಯದೆ ಭ್ರಾಂತುಗೊಂಡಂತೆ ನೈ ।
ಯೆಲ್ಲ ತೂಗಾಡದೊಂದಿನಿಸು ॥
ಅಲ್ಲಾಟವುಂಟೋಜೆವಿಡಿದು ಬಾಯ್ದೆರೆಯುಂಟು ।
ಸಲ್ಲಲಿತದೊಳು ಹಾಡಿದರು ॥ ೭೦ ॥

ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ।
ಜೊಬ್ಬೆಯಿಕ್ಕದೆ ಜೋಕೆಯರಿದು ॥
ಒಬ್ಬರಿಬ್ಬರು ಮೂವರೊಂದೊಂದು ಕಲೆಯ ನೈ ।
ಯುಬ್ಬುವೊಲು ಕೇಳಿಸಿದರು ॥ ೭೧ ॥

ಜೋಲಿವಾಡದೆ ಜೋಕೆವಿಡುದಿರೆ ಪ್ರಾತಃ ।
ಕಾಲದರಾಗವನರಿದು ॥
ಆಳಾಪಿಸಿದರು ಕೇಳುವ ಜನರೆದೆಗೆ ತಂ ।
ಗಾಳಿ ಬೀಸಿದ ತೆರನಾಗೆ ॥ ೭೨ ॥

ಜೋಡುಜೋಡಾಗಿ ತಾವರೆಯಿದಿರೊಳು ಸ್ವರ ।
ಮಾಡುವ ತುಂಬಿಗಳಂತೆ ॥
ನೋಡುತ ಭರತರಾಜನ ಮುಖಪದ್ಮವ ।
ಮಾಡಿದರಾಳಾಪಗಳನು ॥ ೭೩ ॥

ಭರತರಾಜನ ಮುಖಚಂದ್ರನ ಕಂಡ ಜಾ ।
ಣರಿಗೆ ಮಹಾಳಾಪುವುಕ್ಕೆ ॥
ಬರುತಿಪ್ಪುವಿಂದುವ ಕಂಡ ಸಮುದ್ರದ ।
ಭರತದಂತೇನ ಬಣ್ಣಿಪೆನು ॥ ೭೪ ॥

ಭರತಚಕ್ರಿಯ ನೆನೆದರೆ ಬಾರದವರಿಗೂ ।
ಭರತಶಾಸ್ತ್ರದ ಕಲೆಬಹುದು ॥
ಭರತರಾಜನ ಮುಂದೆ ಭರತ ಶಾಸ್ತ್ರದ ಸಿರಿ ।
ಭರತವಪ್ಪುದಾವ ಗಹನ ॥ ೭೫ ॥

ಪ್ರಾತಃಕಾಲದ ರಾಗದೊಳೊಡಗೂಡಿ ।
ವೀತರಾಗನ ಸ್ಮರಣೆಗಳಾ ॥
ರೀತಿಯರಿತು ಹಾಡಿದರು ಕೇಳ್ವರೆಲ್ಲರ ।
ಪಾತಕ ಪರಿದೋಡುವಂತೆ ॥ ೭೬ ॥

ಭೂಪಾಳಿಯಿಂದ ಧನ್ನಾಸಿಯಿಂದಾ ಸರ್ವ ।
ಭೂಪಾಳಿಗೊಡೆಯನ ಮುಂದೆ ॥
ಶ್ರೀಪುರನಾಥನ ಪಾಡಿದರೆಲ್ಲರ ।
ಪಾಪಲೇಪವನ್ನೈದುವಂತೆ ॥ ೭೭ ॥

ಮಲಿನವಿಲ್ಲದ ಮನದಿಂದಾ ನಿಷ್ಕಲನ ನಿ ।
ರ್ಮಲ ನಿತ್ಯನನಾದಿಜಿನನ ॥
ಮಲಹರಿಯಿಂದ ಪಾಡಿದರು ಕೇಳ್ವೆರ ಕರ್ಮ
ಮಲಹರಿವಂತೆ ಗಾಯಕರು ॥ ೭೮ ॥

ದೇಶಾಕ್ಷಿಯಿಂದ ಜಿನೇಶನ ಗುಣಗಳ ।
ದೇಶಾಧಿಪತಿ ಮೆಚ್ಚಿ ಹಾಡಿ ॥
ಕೌಶಲಮಂಗಳಾಷ್ಟಕವನು ಮಂಗಳ ।
ಕೌಶಿಕೆಯಿಂದ ಹಾಡಿದರು ॥ ೭೯ ॥

ದಂಡಿಗೆಗಳ ಶ್ರುತಿದಂಡಿಗೆ ಹೋಗದೆ ।
ಕಂಡೊಡಗೂಡಿ ಕಂಠದೊಳು ॥
ಗುಂಡಾಕ್ರಿ ಭೈರವಿಯಿಂದ ಕುಸುಮಕೋ ।
ದಂಡದಲ್ಲಣನ ಪಾಡಿದರು ॥ ೮೦ ॥

ವೀಣೆಯ ದನಿಯಾವುದದರೊಳು ಪಾಡುವ ।
ಗಾನದ ಧ್ವನಿಯಾವುದೆಂದು ॥
ಕಾಣಿಸಿಕೊಳ್ಳದೆ ಜಿನಸಿದ್ಧ ಮಹಿಮೆಯ ।
ಕಾಣಿಸಿ ಪಾಡಿವರೊಲ್ದು ॥ ೮೧ ॥

ಚೀರದೆ ಬತ್ತದೆ ಜತಿ ಜಾತಿ ಕಟ್ಟಣೆ ।
ಜಾರದೆವೊಡಲ ದಂಡಿಸದೇ ॥
ಏರವಿಳಿಯಲಹುದಹದು ಲೇಸೆದೆ ಸವಿ ।
ದೋರಿ ಹಾಡಿದರು ಗಾಯಕರು ॥ ೮೨ ॥

ಕಿನ್ನರಿವಿಡಿದಾದಿ ದೇವನ ಮಹಿಮೆಯ ।
ಬಿನ್ನಾಣವರಿದು ಪಾಡಿದರು ॥
ಕಿನ್ನರರೇಕೆ ಕಿಂಪುರುಷರೇಕಿವರೆ ಸಾ ।
ಕಿನ್ನೇಕೆ ಹಲಬರೆಂದೆನಲು ॥ ೮೩ ॥

ರನ್ನ ಮೂರರ ಗುಣವನು ಮುಖವೀಣೆಯ ।
ಸನ್ನಾಹದಿಂದ ಹಾಡಿದರು ॥
ಚೆನ್ನಾಯ್ತು ಸೊಬಗಾಯ್ತು ಸೊಗಸಾಯ್ತು ಲೇಸು ಲೇ ।
ಸಿನ್ನೊಮ್ಮೆಯೆಂದು ಕೇಳ್ವಂತೆ ॥ ೮೪ ॥

ದನಿ ಲೇಸು ಮೇಳದ ಜೋಕೆ ಲೇಸಾಳಾಪ ।
ವನುಭವ ಲೇಸು ಮತ್ತಲ್ಲಿ ॥
ಜಿನನಾಮ ಕೂಡಿತು ಲೇಸು ಲೇಸೆಂದು ರಾ ।
ಯನಮುಂದೆ ನುಡಿದರಿಚ್ಛೆಗರು ॥ ೮೫ ॥

ತುಂಬಿಯ ಗಾನವಂತಿರಲಿ ಕೋಕಿಲನಾದ ।
ವೆಂಬರ ಮಾತದಂತಿರಲಿ ॥
ತುಂಬುರನಾರದರಿನ್ನೇಕೆ ಹೋಪುರೆ ।
ಯೆಂಬಂತೆ ಸೊಗಸಿ ಹಾಡಿದರು ॥ ೮೬ ॥

ಹಸುಳೆ ಕಲ್ಮರ ಪಾವು ಪಶುಮೃಗಗಳು ಗಾನ ।
ರಸಕೆ ಸೋಲುವವೆಂದರಿನ್ನು ॥
ರಸಿಕರು ಸೋಲರೆ ಸಭೆಯಲ್ಲ ಕೇಳ್ದು ವೈ ।
ಮುಸಕದಿರ್ದುದು ಬೆರಗಾಗಿ ॥ ೮೭ ॥

ಕೊಳಲಿಗೆ ಪಶು ಮಿಗ ಘಂಟೆಗೆ ಹಸುಳೆ ಜೋ ।
ಗುಳಿಗೆ ಸರ್ಪ ಸುನಾಗಸರಕೆ ॥
ಎಳೆವೆಣ್ಣದನಿಗೊಂದು ವೃಕ್ಷ ಗುಂಡಾಕ್ರಿಗೆ ।
ಶಿಲೆಪೊಸರುವುದಿದು ಘನವೆ ॥ ೮೮ ॥

ಗಾನವೆಲ್ಲಕೆ ಹಿತವಹುದದು ಧರ್ಮಕ ।
ಥಾನುಚರಿತವಾಗೆ ಪುಣ್ಯ ॥
ಹೀನಸತಿಯರಾಟ ಬೇಟೆ ಕಾಳಗ ಬಂದ ।
ರೇನೆನ್ನಬಹುದದು ಪಾಪ ॥ ೮೯ ॥

ಸಮವಸರಣದೊಳು ವಿಮಲಕಿರಣದೊಳ ।
ಗಮಲ ಮುನಿಗಳ ವೃಂದದೊಳು ॥
ಕಮಲಕರ್ಣಿಕೆಗೆ ಸೋಂಕದೆ ನಿಂದ ದೇವನ ।
ಗಮಕವನೊಲ್ದು ಪಾಡಿದರು ॥ ೯೦ ॥

ಚಿತ್ರವಲ್ಲವೆ ನಳಿನದ ಮೇಲೆ ಗಗನ ನಿ ।
ಕ್ಷೇತ್ರದೊಳರುಹನೊಪ್ಪಿಹುದು ॥
ಧಾತ್ರಿಯ ಹಂಗೆ ಹೂವಿನ ಹಂಗೆ ಚಿನ್ಮಯ ।
ಗಾತ್ರಗೆ ಹಂಗಳಿದವಗೆ ॥ ೯೧ ॥

ಸರಸಿಯೊಳಂಬುಜ ಕಾನನದಲ್ಲಿ ಕೇ ।
ಸರಿಯಿಹುದಿದು ಲೋಕರೂಢಿ ॥
ಸುರರ ನಡುವೆ ಸಿಂಹ ಸಿಂಹದ ಮೇಲೆ ತಾ ।
ವರೆ ಇದಚ್ಚರಿ ಜಿನಮಹಿಮೆ ॥ ೯೨ ॥

ಚಂದ್ರನೊಬ್ಬನ ಕಂಡು ಬಲ್ಲೆವು ಮೂವರು ।
ಚಂದ್ರರೊಂದಾಗಿ ರಾಜಿಪುದು ॥
ರುಂದ್ರ ವಿಸ್ಮಯವೆಂದು ಮುಕ್ಕೊಡೆಯೊಡೆಯ ಜಿ ।
ನೇಂದ್ರನನೊಲ್ದು ಪಾಡಿದರು ॥ ೯೩ ॥

ಗಗನದೊಳಮರರು ಜಯಜಯವೆನುತ ಸ್ವಾ ।
ಮಿಗೆ ಹೂಮಳೆಗರೆವಾಗ ॥
ಮುಗಮುಗಿಸುವ ಕಂಪಿಗೆರಗುವ ತುಂಬಿಯ ।
ಬಗೆಯ ಬಿನ್ನಣಿಸಿ ಪಾಡಿದರು ॥ ೯೪ ॥

ದಿಂದಿಮಿ ದಂದಣ ತೊದಿಗಿದಿ ಮಿಕುದಿಂ ।
ಮೆಂದು ನಾನಾ ವಿಧದಲ್ಲಿ ॥
ವೃಂಪಾರಕವೃಂದ ಬಾಜಿಸುತಿಹ ಸುರ ।
ದುಂದುಭಿರವವ ಹಾಡಿದರು ॥ ೯೫ ॥

ಅಂಕುರಪತ್ರಪುಷ್ಪಗಳಿಂದ ನವರತ್ನ ।
ಸಂಕುಳ ರೂಪಿನಿಂದೆಸೆವ ॥
ಕಂಕೇಲಿವೃಕ್ಷ ಜಿನೇಂದ್ರನೊತ್ತಿನೊಳಿರ್ಪ ।
ಬಿಂಕವನೊಲ್ದು ಪಾಡಿದರು ॥ ೯೬ ॥

ದಿವ್ಯಸುಖವ ದಿವ್ಯದರ್ಶನ ಬೋಧವ ।
ದಿವ್ಯಶಕ್ತಿಯ ದಿವ್ಯಪದವಾ ॥
ದಿವ್ಯಸಿದ್ಧಿಯ ನೆಲಗಾಣಿಪ ದೇವನ ।
ದಿವ್ಯಧ್ವನಿಯ ಪಾಡಿದರು ॥ ೯೭ ॥

ಕಾಮನ ಬಿಲ್ಲು ಮೇಲ್ಬಳಸಿದ ಹೇಮಾದ್ರಿ ।
ಸ್ವಾಮಿಯ ರೂಪನಾಂತಂತೆ ॥
ಭಾಮಂಡಲ ಬಳಸಿರಲೆಸೆವರ್ಹನ !
ಭೂಮೀಶ ಮೆಚ್ಚಿ ಹಾಡಿದರು ॥ ೯೮ ॥

ಮಂಜು ಸುತ್ತಲು ಸುಳಿದಾಡುವೆಡೆಯೊಳಪ ।
ರಂಜಿಯ ಗಿರಿ ಮೆರೆವಂತೆ ॥
ರಂಜಿಸುವರುವತ್ತನಾಲ್ಕು ಚಾಮರದ ಬೆ ।
ಡಂಗ ಬಿನ್ನಣಿಸಿ ಹಾಡಿದರು ॥ ೯೯ ॥

ಸಿಂಹಾಸನ ಮೊದಲಾದೆಂಟು ಪ್ರತಿಹಾರ ।
ಸಂಹತಿಯೊಳು ಕಾಂತಿಮಯದಾ ॥
ಸಂಹನನದ ಗಾಡಿ ಮೆರೆಯಲೊಪ್ಪುವ ಕರ್ಮ ।
ಸಂಹಾರ ಜಿನನ ಪಾಡಿದರು ॥ ೧೦೦ ॥

ಜಿನನ ಪೊಗಳಿ ಕೂಡೆ ಸಿದ್ಧರ ಕೀರ್ತಿಸಿ ।
ಮುನಿಗಳ ವಂದಿಸಿ ಮತ್ತೆ ॥
ತನುವಿನೊಳಿದ್ದಾತ್ಮ ತತ್ವವಿಚಾರವ ।
ಜನಪತಿ ಮೆಚ್ಚೆ ಹಾಡಿದರು ॥ ೧೦೧ ॥

ಆರು ಬಲ್ಲರು ಹಂಸತತ್ವವ ತಮ್ಮೊಳ ।
ರೀರ ತುಂಬಿರುತಿಹುದದನು ॥
ಹಾರದೆ ಸಾರದೆ ಹೊರಹೊರಗಾಡಿ ಸಂ ।
ಸಾರದುಃಖವನುಣುತಿಹರು ॥ ೧೦೨ ॥

ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ।
ನೆಳಲಲ್ಲಿ ಮೊಗವ ನೋಳ್ಪಂತೆ ॥
ಒಳಗಿದ್ದ ಚಿದ್ರೂಪ ನೋಡದೆ ಜಗವೆಲ್ಲ ।
ಬಳಲುತಿಹುದು ಹೊರಗಾಡಿ ॥ ೧೦೩ ॥

ಮನೆಯಲ್ಲಿ ಹೂಳಿದ್ದ ನಿಧಿಯ ಕಾಣದೆ ಹೋಗಿ ।
ಧನಿಕರ ಯಾಚಿಸುವಂತೆ ॥
ತನುವಿನೊಳಿದ್ದಾತ್ಮರೂಪನಿಟ್ಟಿಸದೆ ಮೇ ।
ದಿನಿಯ ತೊಳಲಿ ನೋಡುತಿಹರು ॥ ೧೦೪ ॥

ನರುಗಬ್ಬಿನೊಳಗಣ ರಸವ ಕಾಣದೆ ಪಶು ।
ಹೊರಗಣೆಲೆಯ ಸವಿವಂತೆ ॥
ಅರಿದೊಳಗಾತ್ಮ ಸುಖವನುಣಲರಿಯದೆ ।
ಹೊರಗೆಳಸುವರಂಗಸುಖಕೆ ॥ ೧೦೫ ॥

ಪಸುರೆಲೆಗಳ ಬಿಟ್ಟು ತನಿಗಬ್ಬಿನೊಳಗಣ ।
ರಸವಕೊಂಬಾನೆಗಳಂತೆ ॥
ಹಸಗೆಟ್ಟು ತನುಸುಖಕೊಲಿಯದೆ ಕೆಲರು ಭೇ ।
ದಿಸಿ ನಿಜಸುಖವ ಭೋಗಿಪರು ॥ ೧೦೬ ॥

ಪಿಡಿದಿರ್ದು ತನ್ನ ಹಸ್ತದೊಳು ವಸ್ತುವನೋಡ ।
ದಡವಿಯೊಳರಸುವನಂತೆ ॥
ಒಡಲೊಳಿದ್ದಾತ್ಮನ ನೋಡಲೊಲ್ಲದೆ ಮೂರು ।
ಪೊಡವಿಯ ಚಿಂತಿಸುತಿಹರು ॥ ೧೦೭ ॥

ಒರೆಯೊಳಿದ್ದಾಯುಧದಂತೆ ಕಾರ್ಮುಗಿಲಿನ ।
ಮರೆಯೊಳಗಿಹ ಸೂರ್ಯನಂತೆ ॥
ಹೊರಗೆ ಕಲ್ಮಷದ ವೈಯಹುದೊಳಗಾತ್ಮನು ।
ಕರೆವುತಿಹನು ತಿಳಿವೆಳಗಾ ॥ ೧೦೮ ॥

ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ಮೈ ।
ಬೆಳಗೆ ತಾನಾಗಿರುತಿಹುದು ॥
ತಿಳಿವು ಬೆಳಗುಗಳೆ ಹಂಸನ ಕುರುಹೆಂದು ।
ತಿಳಿದು ನೋಳ್ಪವನೀಗ ಧನ್ಯಾ ॥ ೧೦೯ ॥

ಪುರುಷಾಕಾರನು ವೈಯೊಳಿರ್ದುದ ವೈಯ ।
ಬೆರಸದೆ ಶುದ್ಧಾತ್ಮನಿಹನು ॥
ಪುರುಷಾಕಾರವನಾಕಾಶದೊಳಗೊಂದ ।
ಬರೆದರೋ ಎಂಬ ಭಾವದೊಳು ॥ ೧೧೦ ॥

ತಗಡಿನೊಳಗೆ ತೋರ್ಪ ಛಾಯಾಪ್ರತಿಮೆಯೊ ।
ಹಗಲಲ್ಲಿ ಬೆಳುದಿಂಗಳಲ್ಲಿ ॥
ಸೊಗಸುವ ಛಾಯಾಪುರುಷನೋಯೆಂಬಂತೆ ।
ಬಗೆಗೊಳಿಸುವುದಾತ್ಮರೂಪು ॥ ೧೧೧ ॥

ಛಾಯಾಪ್ರತಿಮೆಯು ಛಾಯಾಪುರುಷನ ।
ಛಾಯೆಗೆ ಸುಜ್ಞಾನವಿಲ್ಲ ॥
ಆಯೆರಡಕೆ ತಿಳಿವೊಡಗೂಡಲದು ತಾನೆ ।
ಕಾಯದೊಳಿದ್ದಾತ್ಮರೂಪು ॥ ೧೧೨ ॥

ನಾಲಗೆ ಕುಡುಹು ಶರೀರವೆ ವಾದ್ಯ ನಿ ।
ರಾಳಾತ್ಮನೇ ವಾದ್ಯಕಾರಾ ॥
ತಾಳಿ ನುಡಿಸುತಿರ್ದು ಬಿಟ್ಟುಹೋದರೆ ದೇಹ ।
ಡೋಳಿನಂದದೊಳು ಬಿದ್ದಿಹುದು ॥ ೧೧೩ ॥

ನುಡಿಸುವ ವಾದ್ಯಕಾರನು ಹೋದಮೇಲಲ್ಲಿ ।
ಕುಡುಹುವಾದ್ಯಗಳಿರುತಿಹುದು ॥
ಪಿಡಿದು ಮತ್ತೊಬ್ಬರು ನುಡಿಯಿಸಲರಿದವ ।
ಗಡದ ವಾಕ್ಯವಿದಲ್ತೆ ದೇಹ ॥ ೧೧೪ ॥

ವಾದ್ಯಗಳಾರಾರು ಪಿಡಿದು ಬಾಜಿಸಿದರೆ ।
ವೇದ್ಯವೆನಿಸಿ ದನಿಯಹವು ॥
ಚೋದ್ಯವೀ ತನುವಾದ್ಯ ತಾಳ್ದೋರ್ವಗಲ್ಲದೆ ।
ಭೇದ್ಯವಾಗದು ಧ್ವನಿಗೊಡದು ॥ ೧೧೫ ॥

ನುಡಿಯಲರಿಯದ ದೇಹವ ನುಡಿಯಿಸುವನು ।
ನಡೆಯಲರಿಯದ ದೇಹವನು ॥
ನಡೆಯಿಸುವನು ದೇಹವೆರವೆಂದು ಬಗೆಯದೆ ।
ಕೆಡುತಿಹನಾತ್ಮನಯ್ಯಯ್ಯೊ ॥ ೧೧೬ ॥

ಲೋಹವ ಹೊಕ್ಕಗ್ನಿ ಹೊಯ್ಲಿಗಿಡುವುದಾ ।
ಲೋಹವನಗಲೆ ಹೊಯ್ಲುಂಟೆ ॥
ದೇಹವ ಹೊಕ್ಕಿದ್ದರಾತ್ಮಗೆ ಬಾಧೆಯು ।
ದೇಹವಳಿಯೆ ಬಾಧೆಯುಂಟೆ ॥ ೧೧೭ ॥

ಹೊತ್ತ ದೇಹವ ಬರುಮರಣದೊಳ್ಬಿಟ್ಟರೆ ।
ಮತ್ತೊಂದು ದೇಹ ಮುಂದಹುದು ॥
ಹೊತ್ತ ದೇಹವ ಬಿಟ್ಟು ಮತ್ತೊಂದು ದೇಹವ ।
ಪತ್ತದೆ ನಿಲ್ವುದು ಮುಕ್ತಿ ॥ ೧೧೮ ॥

ಹಿಡಿದ ದೇಹವ ಬಿಟ್ಟು ಮತ್ತೊಂದು ದೇಹವ ।
ಪಿಡಿಯದೆ ನಿಲ್ವುದೆಂತೆನಲು ॥
ಬಿಡದೆ ಸುಜ್ಞಾನಾಗ್ನಿಯಿಂದ ಕರ್ಮದ ಬೇರ ।
ಸುಡವುದೊಂದೆಂದು ಪಾಡಿದರು ॥ ೧೧೯ ॥

ಬೇರು ಪರಿದ ವೃಕ್ಷ ತನ್ನ ತಾ ಕೆಡೆವಂತೆ ।
ಕ್ರೂರತೈಜಸ ಕಾರ್ಮಣಗಳಾ ॥
ಸಾರಾತ್ಮಶಿಖಿಯಿಂದ ಸುಡಲಾಗಿ ಬಾಹ್ಯಶ ।
ರೀರವಳಿವುದಾಗ ಮುಕ್ತಿ ॥ ೧೨೦ ॥

ಆದಿಜಿನನ ವಾಕ್ಯವಿದು ಹಂಸಯೋಗ ನಿ ।
ರ್ಭೇದದ ಭಕ್ತಿ ಸುಯುಕ್ತಿ ॥
ಭೇದವಿಜ್ಞಾನಿಗೆ ಗಮ್ಯವೆಂದಾತ್ಮವಿ ।
ನೋದಿಯು ಮುಂದೆ ಹಾಡಿದರು ॥ ೧೨೧ ॥

ರಾಜನಾಗಲಿ ಯೋಗಿಯಾಗಲಿ ಗೃಹಿಯಾಗ ।
ಲೀಜಿನತತ್ವವನಂದು ॥
ಶ್ರೀಜಿನಭಕ್ತಿಯೊಳಿರೆ ಮುಕ್ತಿತಪ್ಪದೆಂ ।
ದಾ ಜಾಣರೊಲ್ದು ಪಾಡಿದರು ॥ ೧೨೨ ॥

ಹುಟ್ಟಿತಾಗಳೆ ನಸುನಗೆ ಮೊಗದೊಳು ಮನ ।
ದಟ್ಟಿತಾ ನುಡಿಯದೆ ಚಕ್ರಿ ॥
ಇಟ್ಟನವರಮೇಲೆ ತನ್ನ ಕೋಮಲಹಸ್ತ ।
ಮುಟ್ಟೆ ದೇವಾಂಗವಸ್ತ್ರವನು ॥ ೧೨೩ ॥

ಗಾನ ನಿಂದುದು ಗಾಯಕರ ಮೆಚ್ಚುಮಿಗೆ ಬಂದು ।
ದಾನಂದ ಸಂದುದು ಸಭೆಗೆ ॥
ಭೂನಾಥನಾಸ್ಥಾನದೊಳಗಿದ್ದನಿಲ್ಲಿಗಾ ।
**ಸ್ಥಾನಸಂಧಿ** ಸುಗಂಧಿ ॥ ೧೨೪ ॥

ಈ ಜಿನಕಥೆಯನು ಕೇಳಿದವರ ಪಾಪ ।
ಬೀಜನಿರ್ನಾಶನವಹುದು ॥
ತೇಜಪಹುದು ಪುಣ್ಯಾಪಹುದು ಮುಂದೊಲಿದಪ ।
ರಾಜಿತೇಶ್ವರನ ಕಾಣುವರು ॥ ೧೨೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇ ।
ಳ್ದಾಮೋದವೈದುವರವರೂ ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ ।
ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೮ ॥

ಅಭಿಮತಸಿದ್ಧಿದಾಯಕ ಯೋಗಿನಾಯಕ ।
ಉಭಯಲಾವಣ್ಯವರೇಣ್ಯ ॥
ಪ್ರಭೆತೋರುತೆನ್ನಂತರಂಗದೊಳಿರು ಬೋಧ ।
ವಿಭುವೆ ಚಿದಂಬರಪುರುಷಾ ॥ ೧೨೯ ॥

**ಆಸ್ಥಾನಸಂಧಿ ಸಂಪೂರ್ಣಂ**

## ಕವಿವಾಕ್ಯಸಂಧಿ.

ಪರಮಾರ್ಥಗುರುವೆ ಪರಂಜ್ಯೋತಿರೂಪನೆ ।
ಗರಳಹರನೆ ಭವಹರನೆ ॥
ಸರಸದೊಳೆನಗೆ ಸನ್ಮತಿದೋರು ಭವ್ಯಾಬ್ಜ ।
ತರಣಿ ನಿರಂಜನಸಿದ್ಧಾ ॥ ೧ ॥

ಸಂಗೀತಗೋಷ್ಠಿ ನಿಂದುದು ಸಾಹಿತ್ಯಸು ।
ಸಂಗತಿಗೆಳಸಿ ನೃಪೇಂದ್ರ ॥
ತುಂಗವಿದ್ವಾಂಸರ ನೆರವಿಗೊಯ್ಯನೆ ತನ್ನ ।
ಕಂಗಳ ಕಾಂತಿದೋರಿದನು ॥ ೨ ॥

ಕವಿಗಳ ಹಲಬರುಂಟವರ ಮಧ್ಯದೊಳೊಬ್ಬ ।
ದಿವಿಜಕಲಾಧರನೆಂಬ ॥
ಕವಿಯಿದ್ದನವನ ಮೊಗವ ನೋಡಲೊಡನಾ ।
ಕವಿ ನುಡಿದನು ಭಾವವರಿದು ॥ ೩ ॥

ಶ್ರೀಜಿನಚರಣಾಬ್ಜ ಸುರಭಿಮಧುವ್ರತ ।
ರಾಜಾಧಿರಾಜಾಗ್ರಗಣ್ಯ ॥
ರಾಜಿತಹಂಸಕಲಾನಂದ ನಿನಗೆ ಮ ।
ಹಾಜಯ ಸಿದ್ಧಿರಸ್ತೆಂದಾ ॥ ೪ ॥

ಜಯಸಿದ್ಧಿಯೆಂಬುದು ವೈರಿಭೂಪರನೊತ್ತಿ ।
ಜಯಿಸಿದರದು ಲೌಕಿಕಾರ್ಥ ॥
ಭಯಬಡಿಸುವ ಕಾಲಕರ್ಮವನೊತ್ತಿ ।
ಜಯಿಸಿದರದು ಪರಮಾರ್ಥ ॥ ೫ ॥

ಲೌಕಿಕಜಯವಂತರುಂಟು ಪಲಂಬರಾ ।
ಲೌಕಿಕಪರಮಾರ್ಥವೆರಡಾ ॥
ಭೂಕಾಂತರಲ್ಲಿ ಪಡೆವುದು ದುರ್ಲಭ ಸವಿ ।
ವೇಕ ಬೇಕದಕೆ ಚಕ್ರೇಶ ॥ ೬ ॥

ಭೋಗವಿಚಾರವು ಬೇಕು ನೃಪತಿಗಾತ್ಮ ।
ಯೋಗವಿಚಾರವು ಬೇಕು ॥
ರಾಗರಸಿಕನಾಗಬೇಕು ಭಾವಿಸೆ ವೀತ ।
ರಾಗರಸಿಕನಾಗಬೇಕು ॥ ೭ ॥

ಶೃಂಗಾರ ಕೋವಿದನಾಗಬೇಕಾತ್ಮ ಸು ।
ಸಂಘ ಸಂಮುಖನಾಗಬೇಕು ॥
ಸಂಗರಸಂಮುಖನಾಗಬೇಕಾತ್ಮ ಯೋ ।
ಗಾಂಗ ಕೋವಿದನಾಗಬೇಕು ॥ ೮ ॥

ಇಹಲೋಕ ಸುಖವ ಭೋಗಿಸಬೇಕು ನೃಪತಿ ಯು ।
ತ್ಸಹನಾಗಬೇಕು ಧರ್ಮದೊಳು ॥
ಬಹು ಕಾಂಕ್ಷೆಯೊಳು ಸಿಕ್ಕಿದಂತಿರಬೇಕು ನಿಃ ।
ಸ್ಪೃಹನಾಗಬೇಕೆದೆಯೊಳಗೆ ॥ ೯ ॥

ಧರ್ಮದಿಂದಾದುದು ಸಿರಿಯೆಂದು ಸುಖಿಸುತ್ತ ।
ಧರ್ಮವ ಮರೆಯರುತ್ತಮರು ॥
ಧರ್ಮವೇತರದೆಂದು ಭೋಗಕ್ಕೆ ಮರುಳಾಗಿ ।
ಕರ್ಮಿಗಳಾಚರಿಸುವರು ॥ ೧೦ ॥

ಕೊಡಬೇಕು ಕೊಡುವಲ್ಲಿ ಪಾತ್ರವರಿಯಬೇಕು ।
ನುಡಿಬೇಕು ಮೌನವೂಬೇಕು ॥
ಬಡವರಂತಿರಬೇಕು ಪ್ರಭುವಿನಂತಿರಬೇಕು ।
ನಡೆಯಿದು ಜಾತಿಕ್ಷತ್ರಿಯರ ॥ ೧೧ ॥

ಪ್ರಜೆಪರಿವಾರಕ್ಕೆ ಹಿತನಂತೆ ವೈರಿಭೂ ।
ಭುಜರಿಗೆ ಭುಜಗೇಂದ್ರನಂತೆ ॥
ನಿಜಗುರುವಿಗೆ ಭೃತ್ಯನಂತೆ ಧಾರ್ಮಿಕರಿಗೆ ।
ನಿಜಬಂಧುವಾಗಿರಬೇಕು ॥ ೧೨ ॥

ಪರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ ।
ಪರಮತಕ್ಕೊಡಂಬಡೆ ಮೂರ್ಖ ॥
ಅರುಹನಾಗಮದೊಳರ್ತಿಗನಾತ್ಮಕಲೆಯೊಳು ।
ಸರಸನಾಗಿರಬೇಕು ನೃಪತಿ ॥ ೧೩ ॥

ಹವಣಿಸಿಕೊಳ್ಳಬೇಕಿಂದ್ರಿಯವರ್ಗವ ।
ನವಿಚಳನಾಗಿರಬೇಕು ॥
ಭುವನಕಿಂದಿನರಾಯ ಸ್ವರ್ಗಕೆನಾಳಿನ ।
ದಿವಿಜೇಂದ್ರನೆನಿಸಿರಬೇಕು ॥ ೧೪ ॥

ಎರಳೆ ಮೀನಾನೆ ಪತಂಗ ತುಂಬಿಗಳು ಕಾ ।
ತರಿಸಿಯೊಂದೊಂದಿಂದ್ರಿಯದೊಳು ॥
ಪರಿಭವವಡೆದವಿನ್ನೈದಿಂದ್ರಿಯಕೆ ಸಿಕ್ಕಿ ।
ದರಸು ಕೆಡುವುದಾವ ಚೋದ್ಯ ॥ ೧೫ ॥

ಜ್ಞಾನಶೂನ್ಯನ ಪಂಚೇಂದ್ರಿಯ ಪಂಚಾಗ್ನಿ ।
ಜ್ಞಾನಿಯಿಂದ್ರಿಯ ಪಂಚರತ್ನ ॥
ಜ್ಞಾನವಿಲ್ಲದೆ ಭೋಗಿಸುವ ಭೋಗಿ ಭವರೋಗಿ ।
ಜ್ಞಾನವಿಡಿದ ಭೋಗಿ ಯೋಗಿ ॥ ೧೬ ॥

ಜ್ಞಾನಿಯ ಮುಟ್ಟಲಮ್ಮದು ಕರ್ಮವೆನ್ನಲಾ ।
ಜ್ಞಾನ ತಾನಾವುದೆಂದೆನಲು ॥
ಜ್ಞಾನವೆ ನಾನು ಶರೀರ ನಾನಲ್ಲೆಂಬ ।
ಮಾನಸದನುಭವವಲ್ತೆ ॥ ೧೭ ॥

ಬಾಹ್ಯವಿಜ್ಞಾನವೆಂದುಂಟಂತರಂಗ ಸಂ ।
ಗ್ರಾಹ್ಯ ವಿಜ್ಞಾನವೆಂದುಂಟು ॥
ಬಾಹ್ಯದರಿಕೆ ಬಾಹ್ಯ ತನ್ನನರಿವುದು ನಿ ।
ರ್ಬಾಹ್ಯಾಂತರಂಗವಿಜ್ಞಾನ ॥ ೧೮ ॥

ರತ್ನಪರೀಕ್ಷೆ ಗಜಾಶ್ವಪರೀಕ್ಷೆ ಪ್ರ ।
ಯತ್ನಿಸೆ ಬಾಹ್ಯವಿಜ್ಞಾನ ॥
ರತ್ನತ್ರಯರೂಪನಾತ್ಮನೆಂದರಿವುದು ।
ನೂತ್ನಾಂತರಂಗವಿಜ್ಞಾನ ॥ ೧೯ ॥

ಮದನಾಗಮ ವೈದ್ಯ ಯಂತ್ರತಂತ್ರಗಳ ಸಂ ।
ಪದವೆಲ್ಲ ಬಾಹ್ಯವಿಜ್ಞಾನ ॥
ಸದಮಲರೂಪನೆಂದಾತ್ಮನ ನೆನೆವುದು ।
ವಿದಿತಾಂತರಂಗವಿಜ್ಞಾನ ॥ ೨೦ ॥

ಗಣಿತಭರತಶಾಸ್ತ್ರ ಪಂಚಾಂಗವಸ್ತುಲ ।
ಕ್ಷಣವೆಲ್ಲ ಬಾಹ್ಯವಿಜ್ಞಾನ ॥
ಗುಣಗುಣಿಯೊಡಗೂಡಿ ತನ್ನ ತಾನರಿವುದು ।
ಪ್ರಣುತಾಂತರಂಗವಿಜ್ಞಾನ ॥ ೨೧ ॥

ಛಂದೋಲಂಕಾರಕಾವ್ಯನಾಟಕಶಾಸ್ತ್ರ ।
ಸಂದೋಹ ಬಾಹ್ಯವಿಜ್ಞಾನ ॥
ದಂದುಗವಳಿದಾತ್ಮ ತತ್ವನರಿವುದ ।
ದೊಂದಂತರಂಗವಿಜ್ಞಾನ ॥ ೨೨ ॥

ವೇದಪುರಾಣತರ್ಕಾಗಮದರಿಕೆ ಮುಂ ।
ತಾದುದು ಬಾಹ್ಯವಿಜ್ಞಾನ ॥
ಭೇದಿಸಿ ತನ್ನನಧ್ಯಾತ್ಮನೊಳರಿವುದು ।
ಭೇದಾಂತರಂಗವಿಜ್ಞಾನ ॥ ೨೩ ॥

ಹಿಂದೆ ಹಲವು ಜನ್ಮದೊಳು ಬಾಹ್ಯವಿಜ್ಞಾನ ।
ಬಂದುದು ಹೋದುದೆಲ್ಲರಿಗೆ ॥
ಬಂದಂತರಂಗವಿಜ್ಞಾನವಾರಿಗು ಮುನ್ನ ।
ಸಂದಿಸಿತಿಲ್ಲ ರಾಜೇಂದ್ರ ॥ ೧೪ ॥

ಸಾಮಾನ್ಯವಲ್ಲಂತರಂಗ ವಿಜ್ಞಾನ ಮು ।
ಹಾ ಮುಕ್ತಿಪದಕದು ಬೀಜಾ ॥
ಕಾಮಿತವೀವುದು ಸುರತರು ಸುರಭಿ ಚಿಂ
ತಾಮಣಿ ಸಾಟಿಯಲ್ಲದಕೆ ॥ ೧೫ ॥

ದೊರೆಗಂತರಂಗ ವಿಜ್ಞಾನ ನಿಶ್ಚಲವಾಗಿ ।
ದೊರೆಕಂಡರಾ ದೊರೆಗಿನ್ನು ॥
ದೊರೆಯುಂಟೆ ಧರೆಗಿಂದಿನರಸು ಸ್ವರ್ಗಕೆ ನಾಳೆ ।
ನರಸು ಮುಕ್ತಿಗೆ ಮುಂದಣರಸು ॥ ೧೬ ॥

ಸಿರಿಗುಬ್ಬನೆಡರಿಗೆ ತಗ್ಗನಾತ್ಮಜ್ಞಾನಿ ।
ಪರಿಹಾಸಗೋಷ್ಠಿಗೆಳಸನು ॥
ಹರವರಿಯಾಗಿ ನುಡಿಯನು (ಧೈರ್ಯದೊಳು)ಮುಂ ।
ದರದಂತಿಹನು ರಾಜೇಂದ್ರ ॥ ೧೭ ॥

ಇಂದ್ರಿಯಸುಖದೊಳಾಸಕ್ತನಾಗನು ದೇ ।
ವೇಂದ್ರನ ಸಿರಿಗೆ ಕಣ್ಣಿಡನು ॥
ಇಂದ್ರಿಯದನುಭವದೊಳಗಿಹನಹುದು ಯೋ ।
ಗೀಂದ್ರವೃತ್ತಿಗೆ ಮೆಚ್ಚುತಿಹನು ॥ ೧೮ ॥

ಹಂಸನಿರೀಕ್ಷಣದಿಂದುಮ್ಮಿದಮೃತವ ।
ಹಂಸನಂತೀಂಟೆದಣಿವನು ॥
ಸಂಸಾರಸುಖವನುದಾಸೀನಭಾವಾವ ।
ತಂಸದೊಳನುಭವಿಸುವನು ॥ ೧೯ ॥

ಅಡಿಗಡಿಗಾತ್ಮತತ್ವದೊಳಿರ್ದು ಕರ್ಮವ ।
ಕೆಡಿಸುತಿಹನು ಕಿರಿದಾಗಿ ॥
ಕಡುಸಂಯಮಿಯಾಗಿ ಮುಕ್ತಿಗೈದುವೆನೆಂಬ ।
ದೃಢವಿರುತಿಹುದೆದೆಯೊಳಗೆ ॥ ೩೦ ॥

ಆಗಾಗ ದೇಹ ಬೇರಾತ್ಮ ಬೇರೆಂದು ವಿ ।
ಭಾಗಿಸಿ ತನ್ನ ತಾ ನೆಮ್ಮಿ ॥
ಭೋಗಿಸಿದರೆ ಕರ್ಮ ಬಂಧವಿಲ್ಲಾಗಿ ಯಾ ।
ಭೋಗಿ ತಾನೇಯೋಗಿಯಲ್ತೆ ॥ ೩೧ ॥

ಭೂಮಿಯೊಳಗೆ ಹೂಳ್ದ ಲೋಹ ಮಣ್ಬಿಡಿವುದು ।
ಹೇಮ ಮಣ್ಬಿಡಿವುದೇ ನೃಪತಿ ॥
ಕಾಮಿಸಿ ಭೋಗಿಸುವಗೆ ಕರ್ಮಬಂಧ ನಿ ।
ಷ್ಕಾಮಭೋಗಿಗೆ ಬಂಧವುಂಟೆ ॥ ೩೨ ॥

ಹುರಿದು ಬಿತ್ತಿದ ಬೀಜ ಮೊಳೆವುದೆ ರಾಗಾಂ ।
ಕುರವ ಕೆಡಿಸಿದಾತ್ಮವೇದಿ ॥
ವರಭೋಗದೊಳಿದ್ದರೇನಲ್ಲಿ ಮುಂದೆ ನಿ ।
ಷ್ಠುರಕರ್ಮದುತ್ಪತ್ತಿಯುಂಟೆ ॥ ೩೩ ॥

ನಾಗಲೋಕದೊಳಿದ್ದರೇನು ಗರುತ್ಮಗೆ ।
ನಾಗರ ಬಾಧೆಗಳುಂಟೆ ॥
ಭೋಗದೊಳಿದ್ದರೇನಾತ್ಮವಿಜ್ಞಾನಿಗೆ ।
ಭೋಗದಿಂದಿಹ ಕರ್ಮವುಂಟೆ ॥ ೩೪ ॥

ತುಡುಕಲೆಲ್ಲರ ಕೊಲ್ವ ವಿಷವದು ಸಿದ್ಧಗಾ ।
ರುಡಿಗನ ಕೊಲುವುದೆ ಚಕ್ರಿ ॥
ಪೊಡವಿಯೊಳೆಲ್ಲರ ಕೆಡಿಸುವಿಂದ್ರಿಯಸುಖ ।
ಕೆಡಿಸಬಲ್ಲುದೆ ತತ್ವರತನಾ ॥ ೩೫ ॥

ಅಜ್ಜನಾಭಿಯು ಮೆದ್ದು ನಿರ್ವಿಷಸಿದ್ಧತಾ ।
ನಚ್ಚುಗಗೊಳ್ಳದಿರ್ಪಂತೆ ॥
ನಿಚ್ಚಭೋಗದೊಳಿದ್ದರೇನಾತ್ಮವಿಜ್ಞಾನಿ ।
ಸಚ್ಚಿದಾನಂದನಾಗಿಹನು ॥ ೩೬ ॥

ನಿನ್ನ ವರ್ತನವಿದು ಪರಮರಹಸ್ಯವಿಂ ।
ದಿನ್ನೊಬ್ಬರೊಳು ಕಾಣ್ಬುದಿಲ್ಲ ॥
ನಿನ್ನನಡೆಯು ನಿನ್ನನುಡಿಯು ನಿನ್ನೊಳೆ ಕಂಡು ।
ನಿನ್ನ ಮುಂದೋದಿದೆನರಸಾ ॥ ೩೭ ॥

ಅರಸಿಗೆ ಮೆಚ್ಚಾದುದದನೆ ಲೇಸೆಂದೆಲ್ಲ ।
ರೋರೆಯುಬೇಕೆಂಬಂದವಲ್ಲ ॥
ಭರತೇಶ ನಿನ್ನವರ್ತನವಿದು ತತ್ವದ ।
ತಿರುಳೆ ನಿಶ್ಚಯ ಮೋಕ್ಷಮಾರ್ಗ ॥ ೩೮ ॥

ಹೊರಗೆಲ್ಲವ ತೊರೆದೊಳಗೆ ನಿರ್ಮಲನಾಗಿ ।
ಮೆರೆವವರುಂಟು ಲೋಕದೊಳು ॥
ಹೊರಗೆಲ್ಲವಿದ್ದೊಳಗೇನುವಿಲ್ಲೆನೆ ಬಚ್ಚ ।
ಬರಿದಾದರಾರು ನಿನ್ನಂತೆ ॥ ೩೯ ॥

ಈ ಸಿರಿ ಈ ಸೊಬಗೀ ಪ್ರಾಯದೊಳು ಬುದ್ಧಿ ।
ಬೇಸರವಾಗದೆಚ್ಚೆತ್ತು ॥
ಆ ಸಿದ್ಧಪದವಿಗೆ ಕಣ್ಣಿಟ್ಟು ತತ್ವವಿ ।
ಲಾಸಿಯಾರರಸ ನಿನ್ನಂತೆ ॥ ೪೦ ॥

ಇವನನವನ ಗೆಲ್ವರಾವುದುಪಾಯವೆಂ ।
ದವನಿಯೊಳೆಣಿಸುವರುಂಟು ॥
ಜವನ ಜಯಿಸುವರುಪಾಯವೇನೆಂದೆಂಬ ।
ಭುವನೇಶರುಂಟೆ ನಿನ್ನಂತೆ ॥ ೪೧ ॥

ಗಾನವುದ್ವಳೆ ತಾಳಲಯಕೆ ನರ್ತಿಪ ಮಂದ ।
ಯಾನೆಗೆ ಶಿರದ ಕುಂಭದೊಳು ॥
ಧ್ಯಾನವಿಪ್ಪಂತೆ ರಾಜ್ಯದೊಳಿರ್ದು ಮುಕ್ತಿ ಸಂ ।
ಧಾನದೊಳಗೆ ನಿನ್ನ ನೆನಹು ॥ ೪೧ ॥

ಪಟಗಾರನುರೆ ಸೂತ್ರವಿಡಿದಿದ್ದರಾ ಗಾಳಿ ।
ಪಟ ಗಗನದೊಳಾಡುವಂತೆ ॥
ಕುಟಿಲವಲ್ಲಾತ್ಮ ನಿನ್ನಂಗದೊಳಿರ್ದು ಸಂ ।
ಘಟಿಸಿ ಮುಕ್ತಿಯೊಳದೆ ಬುದ್ಧಿ ॥ ೪೨ ॥

ಘಳಿಗೆವಟ್ಟಲನಿಕ್ಕಿದವನೊಂದು ಕಥೆಯ ಹುಂ ।
ಕೊಳಲನ್ಯರಿಗೆ ಹೇಳುತಿರ್ದು ॥
ಘಳಿಗೆವಟ್ಟಲ ನೋಟ ಕೆಡದಂತೆ ನಿನ್ನಾತ್ಮ ।
ನೊಳು ತಾಗುತಿದೆ ನಿನ್ನ ನೆನಹು ॥ ೪೩ ॥

ನಲ್ಲಳೊಲುಮೆಗಾಗಿ ಸಖಸಖಿದೂತಿಯ ।
ರೆಲ್ಲರ ಮನ್ನಿಪನಂತೆ ॥
ಸಲ್ಲಲಿತಾತ್ಮವಿಜ್ಞಾನಾರ್ಥಕಾಗಿ ನ ।
ಮ್ಮೆಲ್ಲರ ಮನ್ನಿಪೆಯಲ್ತೆ ॥ ೪೪ ॥

ಮೊಲೆ ಮುಡಿ ಮುಖ ನಖ ಕಟಿ ತುಟಿಯೆಂದರೆ ।
ಒಲಿದೀವರುಂಟು ಲೋಕದೊಳು ॥
ಒಳಹೊರಗಾತ್ಮ ಶರೀರವೆಂಬೀ ನುಡಿ ।
ಗೊಲಿದೀವರಾರು ನಿನ್ನಂತೆ ॥ ೪೫ ॥

ಹೆಣ್ಣ ಬಣ್ಣಿಸಿದರಂತಿಂತು ಲೇಸೆಂದೆದೆ ।
ಹಣ್ಣಾಗಿ ಕೇಳುವರುಂಟು ॥
ಬಣ್ಣಿಸಲಾತ್ಮತತ್ವಕೆ ಮೆಚ್ಚಿ ಕಿವಿಗೊಡು ।
ವಣ್ಣಂದಿರಾರು ನಿನ್ನಂತೆ ॥ ೪೬ ॥

ಕೊಬ್ಬಿದ ಪೊರವಾರು ಪಿಡಿನಡು ಕೊಂಕಿದ ।
ಹುಬ್ಬಿನ ಪೆಣ್ಣೆಂದರದಕೆ ॥
ಹೆಬ್ಬಿಬ್ಬಿಗೊಂಬವರುಂಟಾತ್ಮ ಕಲೆಗೆ ನೈ ।
ಯುಬ್ಬುವರಾರು ನಿನ್ನಂತೆ ॥ ೪೮ ॥

ಆಕೆಯ ಮದವೆದ್ದ ಜವ್ವನ ಮನ್ಮಥ ।
ಗೇಕ ರಾಜವ ಮಾಳ್ಪದೆನಲು ॥
ಬಾಕುಳಿಗೊಂಡು ಕೇಳುವರುಂಟು ಚಿದ್ರೂಪಿ ।
ನೀ ಕಲೆಗೆಳಸುವರಾರು ॥ ೪೯ ॥

ನಡುಸಣ್ಣ ಮುಡಿತೋರ ತೊಡೆನುಣ್ಪು ಮೊಲೆಗಳಿ ।
ಟ್ಟೆಡೆಯೆಂದರರೆ ಬಾಯಬಿಟ್ಟು ॥
ನಿಡುಕದೆ ಕೇಳ್ವರುಂಟಲ್ಲದಧ್ಯಾತ್ಮದ ।
ನುಡಿಗೇಳ್ವರುಂಟೆ ನಿನ್ನಂತೆ ॥ ೫೦ ॥

ನಳಿತೊಳ್ಗಳೆನೆ ತಕ್ಕೆಯಾದಂತೆ ಪೊಂಗೊಡ ।
ಮೊಲೆಯೆಂದರೆದೆ ಸೋಂಕಿದಂತೆ ॥
ತಳಿರ್ದುಟಿಯೆನಲು ಚುಂಬಿಸಿದಂತೆ ನಲಿವರುಂ ।
ಟೊಲಿವರಾರಧ್ಯಾತ್ಮರಸಕೆ ॥ ೫೧ ॥

ನುಣ್ಬೊಡೆಯೆನೆ ರೋಮ ಜುಂಮೆಂದು ನೇರಿಲ ।
ಪಣ್ದುಟಿಯೆನೆ ಜಿಹ್ವೆಯೊಸರಿ ॥
ಕಣ್ಬೊಳಲಾಗಿ ಕೇಳುವರುಂಟು ಮಚ್ಚರ ।
ಮಾಣ್ದು ಕೇಳುವರುಂಟೆ ನಿಜವಾ ॥ ೫೨ ॥

ರಣಕಥೆ ಜಾರಚೋರರಕಥೆ ಸ್ಮರಕಥೆ ।
ಗಣಿಕಾಕಥೆಗೆದೆಸೋತು ॥
ಗಣನೆಯಿಲ್ಲದ ಭವಕೊಳಗಹರಧ್ಯಾತ್ಮ ।
ಗುಣಕೆ ಮೆಚ್ಚುವರಾರು ನೃಪತಿ ॥ ೫೩ ॥

ಗದ್ದುಗೆಯೇರಿ ದುಷ್ಕಥೆಗೇಳಿ ಹಲಬರು ।
ಬಿದ್ದುಹೋಗುವರಧೋಗತಿಗೆ ॥
ಗದ್ದುಗೆಯೇರಿ ಸತ್ಕಥೆಗೇಳಿ ಮುಕ್ತಿಯ ।
ಹೊದ್ದುವರಾರು ನಿನ್ನಂತೆ ॥ ೫೪ ॥

ಒಳಗಿದ್ದ ದೇವನ ಕಾಣದೆ ಹೊರಗೆ ದೇ ।
ಗುಲುವ ಪೂಜಿಸುವೆಗ್ಗನಂತೆ ॥
ಒಳಗಾಣಾತ್ಮನ ಭಟ್ಟು ವೈಯನೇ ತಾನೆಂದು ।
ಸಲೆ ಹೊಗಳಿಸಿಕೊಳುತಿಹರು ॥ ೫೫ ॥

ಇಂದ್ರನಂತಿನನಂತೆ ಚಂದ್ರನಂತೆಂದು ನ ।
ರೇಂದ್ರರು ಹೊಗಳೆ ಮೆಚ್ಚುವರು ॥
ಇಂದ್ರಾದಿಗಳು ಲಯಕೊಳಗಾದರಾತ್ಮ ಜಿ ।
ನೇಂದ್ರನೆಂದೆನಲೊಲ್ವೆ ನೀನು ॥ ೫೬ ॥

ಉದ್ಧಾರಕೀರ್ತಿ ಕೋಮಲಮೂರ್ತಿಯೆನಲೆಲ್ಲ ।
ರುದ್ಧರಿಸುವರು ವಂದಿಗಳಾ ॥
ಶುದ್ಧ ನಿಶ್ಚಯದೊಳಾತ್ಮಗೆ ಮೂರ್ತಿಯಿಲ್ಲಾತ್ಮ ।
ಸಿದ್ಧನೆಂದನಲೋಲ್ವೆ ನೀನು ॥ ೫೭ ॥

ಸುರತರು ಸುರಭಿ ಚಿಂತಾಮಣಿ ನೀನೆಂದು ।
ವಿರಚಿಸಲೆಲ್ಲರ ಮೆಚ್ಚು ॥
ತರುಪಶುಪಾಷಾಣ ಸಾಟಯಿಲ್ಲಾತ್ಮ ಚಿ ।
ತ್ಪುರುಷನೆಂದರೆ ನಿನ್ನ ಮೆಚ್ಚು ॥ ೫೮ ॥

ನೃತ್ಯಕೇಳಿಯೊಳು ಸಂಗೀತಕೇಳಿಯೊಳು ಸಾ ।
ಹಿತ್ಯಕೇಳಿಯೊಳಾತ್ಮಕಲೆಯಾ ॥
ಅತ್ಯಂತ ಮಮತೆಯೊಳಾದರಿಸುವ ಕೃತ ।
ಕೃತ್ಯರಾರರಸ ನಿನ್ನಂತೆ ॥ ೫೯ ॥

ಭೋಗವಿಲ್ಲದೆ ಭೋಗಿಯಹುದು ನಿನ್ನೊಳಗಾತ್ಮ ।
ಯೋಗವಿಲ್ಲದೆ ಯೋಗಿಯಹುದು ॥
ಭೋಗದೊಳಿದ್ದು ಯೋಗವಮಾಡಿ ಭವ ಮುಕ್ತ ।
ರಾಗುವರಾರು ನಿನ್ನಂತೆ ॥ ೬೦ ॥

ವಿಷಯವಿಷವನುಂಡು ದಕ್ಕಿಸಬಲ್ಲ ನಿ ।
ರ್ವಿಷಸಿದ್ಧ ನೀನವನೀಶಾ ॥
ವಿಷಮಚಿತ್ತವನಾತ್ಮನೊಳು ನಿಲಿಸಿದ ರಾಜ ।
ಋಷಿಯಲ್ತೆ ರಾಜನೆ ನೀನು ॥ ೬೧ ॥

ಕಂಡವರಿಗೆ ಪುಣ್ಯನೃಪತಿ ನಿನ್ನಯ ಪೆಸ ।
ರ್ಗೊಂಡವರಿಗೆ ಪಾಪನಾಶಾ ॥
ಕಂಡುದ ನುಡಿದೆನು ಸ್ತುತಿಯೆನ್ನದಿರು ಲೇಸ ।
ಕಂಡು ಬಾಯಾಲ್ಪನು ಕವಿಯೇ ॥ ೬೨ ॥

ಕಾಲಕಾಲೋಚಿತ ಜಿನಸಿದ್ಧ ವಂದನೆ ।
ಲಾಲಿತಾತ್ಮನ ಕಾಣ್ಬಯೋಗ ॥
ಶೀಲಸಂಗತವಾದ ಭೋಗವೆಸೆವ ಭೂಮಿ ।
ಪಾಲನ ಹೊಗಳದರಾರು ॥ ೬೩ ॥

ಸತ್ಪಾತ್ರದಾನಿಗೆ ತತ್ವ ವಿಜ್ಞಾನಿಗೆ ।
ಚಿತ್ಪರಿಣಾಮಾನುಭವಿಗೆ ॥
ಸತ್ಪುರುಷರು ಸೋಲ್ವರರಸ ತುಂಬಿಗಳು ಮ ।
ಹೋತ್ಪಲರಸಕೆ ಸೋಲ್ವಂತೆ ॥ ೬೪ ॥

ಜೀರ್ಣೋದ್ಧಾರಣ ಜಿನಯಜ್ಞ ಸುಕಥಾ ।
ಕರ್ಣನ ಜಿನಸಂಘಪೂಜೆ ॥
ವರ್ಣವರ್ಣಿತದ ಪ್ರಜಾರಕ್ಷೆಯುಳ್ಳನ ।
ವರ್ಣಿಸದವರಾರು ರಾಯ ॥ ೬೫ ॥

ಜಿನಸಿದ್ಧ ಭಕ್ತಿ ಸದ್ಗುರು ಭಕ್ತಿ ಶಾಸ್ತ್ರಲಾ ।
ಲನೆಯುಳ್ಳ ಪ್ರಕೃತಿಯ ಕಂಡು ॥
ಜನಜಾಲವೆರಗುವುದಕ್ಕರುಪಿಗೆ ತನ್ನ ।
ಜನಕನ ಕಂಡ ರೀತಿಯೊಳು ॥ ೬೬ ॥

ಜಿನಸಿದ್ಧರೂಪ ಬೇರಿಟ್ಟು ಕಾಣದೆ ತನ್ನ ।
ಮನದೊಳಗಿಟ್ಟು ಕಾಣ್ಬವಗೆ ॥
ಜಿನನಾಥನೊಲಿವನು ಸ್ತ್ರೀವಶ್ಯನೃಪವಶ್ಯ ।
ಜನವಶ್ಯವದು ತಾನೇ ನೃಪತಿ ॥ ೬೭ ॥

ಅಂತರಂಗದೊಳಾತ್ಮ ರೂಪನೊಳ್ಪಾಗರು ।
ಹಂತ ತಾನಲ್ಲಿರ್ಪನೆನಲು ॥
ವ್ಯಂತರವಶ್ಯ ವಿದ್ಯಾವಶ್ಯ ಕೈವಲ್ಯ ।
ಕಾಂತಾವಶ್ಯ ವೆಗ್ಗಳವೆ ॥ ೬೮ ॥

ತನು ಜಿನಗೃಹವೆಂದು ಮನ ಸಿಂಹಪೀಠವೆಂ ।
ದನುಪಮಾತ್ಮನೆ ಜಿನನೆಂದು ॥
ನೆನಹನೆಲ್ಲವ ಬಿಟ್ಟು ಕಣ್ಮುಚ್ಚಿ ನೋಳ್ಪಾಗ ।
ಜಿನನಾಥ ತೋರುವನೊಳಗೆ ॥ ೬೯ ॥

ಮರೆದೊಂದು ವಸ್ತುವ ಕೆಡಿಸಿ ಮತ್ತೆಚ್ಚೆತ್ತು ।
ಅರಸುವನಂತದ ನೆನೆದು ॥
ಅರಿವು ನೋಟವೆ ದೇಹ ನನಗೆಂದು ಮೈಯೊಳ ।
ಗಿರಲಲ್ಲಿಯೆ ತೋರ್ಪನಾತ್ಮಾ ॥ ೭೦ ॥

ಕಲಿತು ಮರೆದುದೊಂದು ಪದ್ಯವ ನೆನೆದುದ ।
ನೊಳಗೊಳಗಾಲೋಚಿಪಂತೆ ॥
ತಿಳಿವು ಬೆಳಗು ನನ್ನ ರೂಪೆಂದು ನೆನಹು ಮೈ ।
ಯೊಳಗಾಡಲಾತ್ಮ ತೋರುವನು ॥ ೭೧ ॥

ಸುರಚಿರ ಛಾಯಾ ಪ್ರತಿಮೆಗೆ ಛಾಯಾ ।
ಪುರುಷಗೆ ಸದೃಶನನೆಂದು ॥
ಸ್ಮರಿಸುತ ಕಣ್ಮುಚ್ಚಿ ನೋಡಿದರವರಂತೆ ।
ಪರಮಾತ್ಮ ತೋರುವನೊಳಗೆ ॥ ೭೨ ॥

ಪ್ರಾಭೃತಶಾಸ್ತ್ರವನೋದಿ ವಾಯುಗಳ ಮು ।
ಹಾ ಭೃತ್ಯರೆನೆ ವಶಮಾಡಿ ॥
ಭೂಭೃನ್ನಾಥ ಚಿತ್ತೈಸೊಳಗೀಕ್ಷಿಸೆ ।
ಶ್ರೀಭೃತನಾತ್ಮ ತೋರುವನು ॥ ೭೩ ॥

ರವಿಶಶಿಗಳ ಕಟ್ಟಿ ಪ್ರಾಣಾಪಾನ ವಾ ।
ಯುವ ಬ್ರಹ್ಮರಂಧ್ರಕೇರಿಸಲು ॥
ಕವಿದ ಕತ್ತಲೆಗೆಟ್ಟು ಮೈಯೊಳಗಾತ್ಮ ತೋ ।
ರುವನು ಪ್ರಕಾಶರೂಪಾಗಿ ॥ ೭೪ ॥

ವಾಯುವ ಜಯಿಸಿ ಕೆಲರು ಕಾಣ್ಬರಾತ್ಮನ ।
ವಾಯುವ ಜಯಿಸದೆ ಕೆಲರು ॥
ಕಾಯದೊಳಾತ್ಮನ ಕಾಣ್ಬರು ಕಾಂತಿಯೆ ।
ಕಾಯಸುಖವೆ ಸುಳುಹಾಗಿ ॥ ೭೫ ॥

ಭೊಗ್ಗನೊಂದೇ ದಿನದೊಳು ತೋರನಾತ್ಮನು ।
ಬಗ್ಗಿದಾಗಳೆ ಬಾಗಿಲಹುದೇ ॥
ನುಗ್ಗೆಯು ಮರನಲ್ಲ ಕರ್ಮವೆಂಬುದು ಕರ್ಮ ।
ಜಗ್ಗಲೊಯ್ಯನೆ ತೋರುತಿಹನು ॥ ೭೬ ॥

ಎಳೆಮಿಂಚಿನಂದದ ಬೊಂಬೆಯೊ ತಿಂಗಳ ।
ತಿಳಿವೆಳಗಿನೊಳಾದ ರೂಪೋ ॥
ಪಳಕಿನ ಪುತ್ತಳಿಯೋಯೆನೆ ಕ್ರಮದಿಂದ ।
ಹೊಳೆವುದೊಳಗೆ ತನ್ನರೂಪು ॥ ೭೭ ॥

ಜ್ಯೋತಿರ್ಲೋಕವ ಹೊಕ್ಕಂತೆ ತಂಪಿನ ।
ಜ್ಯೋತಿಯ ನಡುವೆ ನಿಂದಂತೆ ॥
ತಾ ತನ್ನ ನಿಜವನೋಳ್ಪಾಗಳೀವುದು ತನು ।
ವಾತದೊಳಿಹ ಸಿದ್ಧರಂತೆ ॥ ೭೮ ॥

ನುಡಿಯಿಲ್ಲ ನಡೆಯಿಲ್ಲ ತನುವಿಲ್ಲ ಮನವಿಲ್ಲ ।
ಕಡೆಗೆ ಪಂಚೇಂದ್ರಿಯವಿಲ್ಲ ॥
ಕಡುಸುಖ ಸುಜ್ಞಾನಕಾಂತಿಯೆ ರೂಪಾಗಿ ।
ವೊಡಲು ತುಂಬಿಹುದಾತ್ಮರೂಪು ॥ ೭೯ ॥

ತನ್ನ ತಾ ನೋಳ್ಪಾಗ ನೋಡು ಚಿತ್ರವ ಕರ್ಮ ।
ತನ್ನ ತಾ ಜರಿದೋಡುತಿಹುದು ॥
ಮುನ್ನೆಂದು ಕಂಡು ಕೇಳಿದ ತೆರನಲ್ಲದೊಂ ।
ದುನ್ನತ ಸುಖ ಹುಟ್ಟುತಿಹುದು ॥ ೮೦ ॥

ಮುಕ್ತಿ ಸುಖಕೆ ಬೀಜವಾ ಬೀಜ ನಿರ್ಭೇದ ।
ಭಕ್ತಿ ಜಿನೇಂದ್ರನ ಮೆಚ್ಚು ॥
ಮುಕ್ತಿಗಾಮಿಗಳು ಬಲ್ಲರು ನೀನೆ ಬಲ್ಲೆ ವಿ ।
ರಕ್ತರರಸ ರಾಜಯೋಗಿ ॥ ೮೧ ॥

ನಾವೆಲ್ಲ ಬಲ್ಲೆವೆ ನುಡಿವೆವೆಂದರೆ ಹಂಸ ।
ಭಾವನೆಯಿಂದಾದ ಸುಖವಾ ॥
ಭಾವಿತಾತ್ಮರ ಶಿರೋಮಣಿಯೆ ನೀನೇ ಬಲ್ಲೆ ।
ನಾವೊಡಂಬಡಬಲ್ಲೆವದಕೆ ॥ ೮೨ ॥

ದೇವ ನೀನಧ್ಯಾತ್ಮಸೂರ್ಯ ನಿನ್ನಿದಿರಲ್ಲಿ ।
ನಾವೆಲ್ಲರಧ್ಯಾತ್ಮರಸವಾ ॥
ಈ ವಿಧವೆಂಬುದು ರವಿಗೆ ಪ್ರಕಾಶವ ।
ದೀವಿಗೆಗಳು ತೋರ್ಪರೀತಿ ॥ ೮೩ ॥

ಬಾವನ್ನವೃಕ್ಷದೊತ್ತಿನೊಳಿರ್ದುದ ಮರಗಳು ।
ತಾವೆಲ್ಲ ಕಮ್ಮನಪ್ಪಂತೆ ॥
ದೇವ ನಿನ್ನೊಡನಾಡಿ ನಾವೆಲ್ಲರರಿದೆವು ।
ಜೀವಶುದ್ಧಿಯ ತುದಿಮೊದಲಾ ॥ ೮೪ ॥

ಇಂದು ಮುಂದುರೆ ನೀನೇ ಸುಖಿ ನಿನ್ನನೋಲೈಪ ।
ಮಂದಿಯೆಲ್ಲರು ಸುಖಿಯಾಯ್ತು ॥
ಇಂದು ಕಂಡೆವು ಸ್ವಾಮಿಯೆಂತಂತೆ ಪರಿವಾರ ।
ವೆಂದೆಂಬ ವಾಕ್ಯದರ್ಥವನು ॥ ೮೫ ॥

ದಿವಿಜಕಲಾಧರಕವಿಯಿಂತು ರಚಿಸಿದ ।
ನವಸುಪ್ರಸಂಗ ರಾಯನಿಗೆ ॥
ಕಿವಿಹೊಕ್ಕುದೆದೆದಟ್ಟತಧ್ಯಾತ್ಮವೆಂಬಾಗ ।
ಲವಲವಿಸುವನಾ ನೃಪತಿ ॥ ೮೬ ॥

ತನ್ನಂತರಂಗಾನುಭವವನೆಲ್ಲವನೀತ ।
ಮುನ್ನ ಕಂಡಂತೆ ಪೇಳ್ದಪನು ॥
ಬಿನ್ನಣಿಯಹುದೆಂದು ಬಾಯ್ದೆರೆದುಸುರದೆ ।
ತನ್ನೆದೆಯೊಳು ಮೆಚ್ಚಿ ನೆನೆದಾ ॥ ೮೭ ॥

ಈತಗಾತ್ಮಧ್ಯಾನವುಂಟಲ್ಲದಿದ್ದರೀ ।
ಚಾತುರ್ಯವಚನವೆಂತಹುದು ॥
ಮಾತು ತಾನೇ ಮನದೊಳಗ ಸೂಚಿಸುವುದೆಂ ।
ದಾತ ನೆನೆದನೆದೆಯೊಳಗೆ ॥ ೮೮ ॥

ಈ ಕಡೆಗಾ ಕಡೆಗೆಡೆಯಾಡಬಹುದೆಲ್ಲ ।
ರಾಕಾಶದೊಳಗಾಡಬಹುದೇ ॥
ಲೋಕವನೆಲ್ಲವ ಹೇಳಬಹುದಧ್ಯಾತ್ಮವ ।
ದೇಕೆ ಬಹುದು ಬಾಹ್ಯಜನಕೆ ॥ ೮೯ ॥

ಶಬ್ದಸಮುದ್ರವ ಹೊಕ್ಕೊಂದು ಪದಕೆ ನೂ ।
ರಬ್ಬ ಪ್ರಸಂಗಿಸಬಹುದು ॥
ಶಬ್ದವರ್ಜಿತ ಹಂಸಯೋಗವಿಂತೆನುತೊಂದು ।
ಶಬ್ದಮಾತ್ರವ ಹೇಳಬಹುದು ॥ ೯೦ ॥

ತರ್ಕಶಾಸ್ತ್ರದೊಳೊಡ್ಡಿ ತಗರುತಗರಿನಂತೆ ।
ಮಾರ್ಕೊಂಡು ಹೊಡೆದಾಡಬಹುದು ॥
ಅರ್ಕನಂತೆಸೆವಾತ್ಮಯೋಗವಿಂತಿಹುದೆಂದು ।
ಬೇರ್ಕೈದು ವಚನಿಸಲರಿದು ॥ ೯೧ ॥

ಆಗಮುಕಾವ್ಯನಾಟಕದೊಳೆಲ್ಲರ ತಲೆ ।
ದೂಗಿಸಿ ಮಲಗಿಸಬಹುದು ॥
ಮೂಗರು ಕಂಡ ಕನಸಿನಂತೆ ಮೆರೆವಾತ್ಮ ।
ಯೋಗವನಾರಾಡಬಹುದು ॥ ೯೨ ॥

ಮುಡಿಮೊಗಮೊಲೆಯ ವರ್ಣಿಸಿ ಕೇಳ್ವರೆಲ್ಲರು ।
ಟ್ಟುಡುಗೆಯ ಸುಲಿಕೊಳ್ಳಬಹುದು ॥
ನುಡಿಯಬಾರದ ಪರಂಜ್ಯೋತಿಯನಿಂತೆಂದು ।
ನುಡಿದು ಮೆಚ್ಚಿಸಲೊಬ್ಬರಳವೆ ॥ ೯೩ ॥

ಕದನದೊಳಂತಿಂತು ತರಿದರಿರಿದರೆಂದು ।
ಯೆದೆತೂಳವೇಳಿಸಬಹುದು ॥
ಇದನಾರು ನುಡಿಯಬಹುದು ಪರಬೊಮ್ಮನ ।
ಸದರವೆಯೆಂದು ನೆನೆದನು ॥ ೯೪ ॥

ಅತ್ಯಾಸನ್ನಭವ್ಯರಿಗಲ್ಲದಾತ್ಮಸಂ ।
ಗತ್ಯವೆಲ್ಲರಿಗೇಕೆ ಬಹುದು ॥
ಸ್ತುತ್ಯಸುಧ್ಯಾನಿಗಳ್ಪೇಳ್ವರಧ್ಯಾತ್ಮಸಾ ।
ಹಿತ್ಯ ಸದರವೆಂದು ನೆನೆದಾ ॥ ೯೫ ॥

ಉಂಡವ ತೇಗುವಂತಾತ್ಮನ ಭಾವಿಸಿ ।
ಕಂಡವನದ ಪೇಳಬೇಕು ॥
ಕಂಡು ಪೇಳಿದರು ನಿರ್ಭವ್ಯರೊಪ್ಪರು ಭವ್ಯ ।
ಪುಂಡರೀಕರು ಮೆಚ್ಚಬೇಕು ॥ ೯೬ ॥

ಈ ಕವಿಯಾಸನ್ನಭವ್ಯನಹುದು ಸಿದ್ಧ ।
ಲೋಕಪಥಿಕನಹುದೆಂದು ॥
ವಾಕುದೋರನೆ ಮುನ್ನ ನೆನೆದು ಮತ್ತೊಯ್ಯನೆ ।
ವಾಕು ತೋರಿದನಾ ಚಕ್ರಿ ॥ ೯೭ ॥

ಬಾರೈ ದಿವಿಜಕಲಾಧರ ಸುಕವಿಯೆಂ ।
ದಾ ರಾಯನೊತ್ತಿಗೆ ಕರೆದು ॥
ತೋರಹಸ್ತದೊಳುಡುಗೊರೆಯನಿತ್ತನು ಕಲ್ಪ ।
ಭೂರುಹ ಕೈನೀಡಿದಂತೆ ॥ ೯೮ ॥

ಕಡಗ ಕಂಠಮಾಲೆ ಪದಕ ಕುಂಡಲವಿತ್ತ ।
ನೊಡನೆ ಕುಲ್ಲಾಯಿ ಕಬಾಯಿ ॥
ನಿಡುಬೊಂಬೆ ಪಟ್ಟೆ ಪಚ್ಚಡವಿತ್ತು ವೀಳಯ ।
ಗೊಡುತ ಜಾಳಿಗೆ ನೂರಗೊಟ್ಟಾ ॥ ೯೯ ॥

ಭದ್ರಹಸ್ತಿಯೊಳು ಹತ್ತೆಂಬು ಕೀಲಾರಸ ।
ಮುದ್ರದಿ ನೂರಾರಗೊಟ್ಟ ॥
ಮುದ್ರಿಸಿ ನೂರೆಂಟು ಗ್ರಾಮುದ ದಾರಿದ್ರ್ಯ ।
ವಿದ್ರಾವಣ ಧಾರೆಯೆಲೆದಾ ॥ ೧೦೦ ॥

ಬಳಿಕಿಷ್ಟು ನಗೆಗೂಡಿ ಚೆನ್ನಾಯ್ತು ನಿನ್ನಾತ್ಮ ।
ನೊಳಗಕಂಡ್ಯೆ ಲೇಸ ನುಡಿದ್ಯೆ ॥
ಬಳಲಿದೆ ಕುಳ್ಳಿರೆಂದಿಂತಯ್ದು ನುಡಿಯಿಂದ ।
ಕಳುಹಿದವನನು ರಾಯ ॥ ೧೦೧ ॥

ಜೈನಾಗಮವಿದು ಸದರವೆ ನುಡಿವೊಡೆ ।
ನಾನೆಷ್ಟರವನು ರಾಜೇಂದ್ರ ॥
ಈ ನಿನ್ನ ಸಭೆಯ ವಿದ್ವಾಂಸರೆ ಬಲ್ಲರೆಂ ।
ದಾನಂದಿಸುತ ತೊಲಗಿದನು ॥ ೧೦೨ ॥

ಈ ದೊರೆಯಂತರಂಗವ ಕಂಡ ಮನುಜರಿ ।
ಲ್ಲೀ ಧೀರಕಂಡು ನಡೆದನು ॥
ಬೋಧಾಗ್ರಣಿಯೆಂದು ಸಭೆಯೆಲ್ಲ ದಿವಿಜಕ ।
ಲಾಧರಕವಿಯ ಕೀರ್ತಿಸಿತು ॥ ೧೦೩ ॥

ಕವಿಯ ಜ್ಞಾನಕೆ ರಾಯ ರಾಯನುಪಾರ ಗೌ ।
ರವಕೆಲ್ಲರರ್ತಿಸುವಾಗ ॥
ಧವಲಶಂಖಧ್ವನಿ ಘಳಿಯಾರದಲ್ಲಿ ಭುಂ ।
ಭುವ ಭುಂಮೆನೆ ಕೇಳಲಾಯ್ತು ॥ ೧೦೪ ॥

ಆರೋಗಣೆವೇಳೆಗೆ ಸನ್ನೆಯಾಯ್ತೆಂದು ।
ಆ ರಾಜಸಭೆ ಭೋಂಕನೆದ್ದು ॥
ಆ ರಾಯಗೆರಗಿ ಬೀಳ್ಕೊಂಡುದು ಕಡಲ ಮ ।
ಹಾರವಮೆನೆ ಧ್ವನಿ ಮಸಗೆ ॥ ೧೦೫ ॥

ಪರಿವಾರ ಪ್ರಜೆಗಳ ಚಿತ್ತೈಸು ಸ್ವಾಮಿ ಗಾ ।
ನರ ಪಾಠಕರನು ಚಿತ್ತೈಸು ॥
ದೊರೆಗಳ ಚಿತ್ತೈಸೆಂದು ಕಟ್ಟೆಗೆಗಾರ ।
ರೊರೆದು ಬೀಳ್ಕೊಡಿಸಿದರಾಗ ॥ ೧೦೬ ॥

ಕಳುಹಿಸಿಕೊಳ್ಳೆ ವಾರಾಂಗನೆಯರು ಕವಿ ।
ಗಳು ಸಚಿವರು ಕರಣಿಕರು ॥
ಅಳಿಯಂದಿರರ ಸುಕುಮಾರರೆಂದೆಲ್ಲರ ।
ಕಳುಹಿಸಿದರು ವೇತ್ರಧರರು ॥ ೧೦೭ ॥

ಓಲಗ ಹರಿದುಮೊಯ್ಯನೆಯೆದ್ದು ಆ ನರ ।
ಪಾಲಕ ಜಿನಶರಣೆಂದು ॥
ಕಾಲತೊಡವು ಝಣ ಝಣರೆನಲೆದ್ದನೊ ।
ಡ್ಡೋಲಗದಿಂದ ಜೀಯೆನಲು ॥ ೧೦೮ ॥

ನಿತ್ಯದಾನವನೀಯೆದಾರೋಗಿಸೆನೆಂಬ ।
ಸತ್ಯಾಂಗವುಂಟಾ ನೃಪಗೆ ॥
ನಿತ್ಯದಾನಕೆ ಮುನಿಗಳ ತರಬೇಕೆಂಬ ।
ಕೃತ್ಯಕೆ ಸನ್ನದ್ಧನಾದಾ ॥ ೧೦೯ ॥

ಕವಿ ತನ್ನ ಹೃದಯವನರಿದುದ ನಚ್ಚುತ ।
ಭುವನೇಶನೆದ್ದು ಯೋಗಿಗಳ ॥
ಭವನಕೆ ತರಲನುವಾದನೆಂಬಲ್ಲಿಗೆ ।
**ಕವಿವಾಕ್ಯಸಂಧಿ** ಸುಗಂಧಿ ॥ ೧೧೦ ॥

ಈ ಜಿನಕಥೆಯನು ಕೇಳಿದವರ ಪಾಪ ।
ಬೀಜನಿರ್ನಾಶನವಹುದು ।
ತೇಜವಹುದು ಪುಣ್ಯವಹುದು ಮುಂದೊಲಿದಪ ।
ರಾಜಿತೇಶ್ವರನ ಕಾಣುವರು ॥ ೧೧೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ ।
ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ ।
ಸ್ವಾಮಿಯ ಕಾಣ್ಬರರ್ತಿಯೊಳು ॥ ೧೧೨ ॥

ಜ್ಞಾನವಾವುದು ಸುಖವಾವುದು ಪ್ರಭೆಯಾವು ।
ದಾನಾವನೆಂಬ ವಿಕಲ್ಪಾ ॥
ಏನುವಿಲ್ಲೆನಲೆನ್ನ ನೆನಹಿನೊಳಿರು ದಿವ್ಯ ।
ಭಾನು ಚಿದಂಬರಪುರುಷಾ ॥ ೧೧೩ ॥

**ಕವಿವಾಕ್ಯಸಂಧಿ ಸಂಪೂರ್ಣಂ**

# ನಮ್ಮ ಪ್ರಕಟಣೆಗಳು

**ಕಥೆಗಳು :—**

| | | | |
|---|---|---|---|
| ಕಥಾವಲ್ಲರಿ : ಶ್ರೀ ತ. ಸು. ಶಾಮರಾಯ | ೨ | ೦ | ೦ |
| ಮೈಥಿಲಿ : ಶ್ರೀ ಎಸ್. ಅನಂತನಾರಾಯಣ | ೧ | ೮ | ೦ |
| ಬಾಳಕಣಿವೆ : ಶ್ರೀ ಶ್ಯಾಮ | ೧ | ೦ | ೦ |
| ಮುರಿದ ಮದುವೆ : ಶ್ರೀ ಜಿ. ವೆಂಕಟಯ್ಯ | ೧ | ೮ | ೦ |
| ದುರ್ಗಾಮಂದಿರ : ಶ್ರೀ ಕೆ. ಆರ್. ಉಡುಪ | ೧ | ೦ | ೦ |
| ಜೀವನ : ಶ್ರೀ ಅಶ್ವತ್ಥ | ೨ | ೦ | ೦ |
| ಪುರುಷಾಮೃಗ : ಶ್ರೀ ಆನಂದ | ೨ | ೦ | ೦ |
| ತ್ಯಾಗ : ಶ್ರೀ ಜಿ. ಗುಂಡಣ್ಣ | ೧ | ೮ | ೦ |

**ನಾಟಕಗಳು :—**

| | | | |
|---|---|---|---|
| ದುರಂತ ಮತ್ತು ಇತರ ಪ್ರಸಾರ ನಾಟಕಗಳು : ಶ್ರೀ ಎಚ್. ಕೆ. ರಂಗನಾಥ್ | ೧ | ೮ | ೦ |
| ರೂಪಾಯಿಗಿಡ : ಶ್ರೀ ಕ್ಷೀರಸಾಗರ | ೦ | ೮ | ೦ |
| ಅಂಗುಲಿಮಾಲಾ : ಶ್ರೀ ಪ್ರಭುಶಂಕರ | ೧ | ೦ | ೦ |
| ತಪಸ್ವಿನಿ : ಶ್ರೀ ಭಾರತಿ | ೦ | ೮ | ೦ |
| ಬಹುಮಾನ : ಶ್ರೀ ಅಶ್ವತ್ಥ | ೧ | ೮ | ೦ |
| ನಿತ್ಯನಾಟಕ ಮತ್ತು ಶಾಮಣ್ಣನ ಸಾಹಸ : ಶ್ರೀ ಕ್ಷೀರಸಾಗರ | ೧ | ೦ | ೦ |
| ಉದರನಿಮಿತ್ತಂ : ನ. ಸುಬ್ರಹ್ಮಣ್ಯಂ | ೦ | ೮ | ೦ |

**ಸಂಗ್ರಹಗಳು :—**

| | | | |
|---|---|---|---|
| ಆದಿಪರ್ವ ಸಂಗ್ರಹ (ಗದುಗಿನ ಮಹಾಭಾರತ) | ೧ | ೮ | ೦ |
| ಸಭಾಪರ್ವ ಸಂಗ್ರಹ : ,, | ೨ | ೦ | ೦ |
| ವಿರಾಟಪರ್ವ ಸಂಗ್ರಹ ,, | ೨ | ೦ | ೦ |
| ಉದ್ಯೋಗಪರ್ವ ಸಂಗ್ರಹ ,, | ೧ | ೮ | ೦ |
| ಅರಣ್ಯಪರ್ವ ಸಂಗ್ರಹ ,, | ೧ | ೮ | ೦ |
| ಜೈಮಿನಿ ಭಾರತ ಸಂಗ್ರಹ : ಶ್ರೀ ತ. ಸು. ಶಾಮರಾಯ | ೩ | ೦ | ೦ |
| ಮಹಾಭಾರತ ಸಂಗ್ರಹ ಭಾಗ ೧ : ,, | ೪ | ೦ | ೦ |
| ಬಸವರಾಜದೇವರ ರಗಳೆ : ಶ್ರೀ ಟಿ. ಎಸ್. ವೆಂ. | ೨ | ೦ | ೦ |

| | | | |
|---|---|---|---|
| **ಕವಿತೆಗಳು :—** | | | |
| ಸಾಮಗಾನ : ಶ್ರೀ ಜಿ. ಎಸ್. ಶಿವರುದ್ರಪ್ಪ | ೧ | ೪ | ೦ |
| ಚೆಲುವು-ಒಲುವು : ,, | ೧ | ೦ | ೦ |
| ಕರ್ಣ : ಶ್ರೀ ಎಂ. ಎಸ್. ಅನಂತಪದ್ಮನಾಭರಾವ್ | ೧ | ೦ | ೦ |
| ವಾಣಿಯಕೃಪೆ : ಶ್ರೀ ಜಿ. ಗುಂಡಣ್ಣ | ೧ | ೦ | ೦ |
| **ಪ್ರವಾಸ ಸಾಹಿತ್ಯ :—** | | | |
| ಹೈಮಾಚಲ ಸಾನ್ನಿಧ್ಯದಲ್ಲಿ : ಶ್ರೀ ಸೋಮನಾಥಾನಂದ | ೨ | ೦ | ೦ |
| ಅಮರನಾಥಯಾತ್ರೆ : ಶ್ರೀ ಸೋಮನಾಥಾನಂದ | ೧ | ೦ | ೦ |
| ಕೈಲಾಸ ಮಾನಸಸರೋವರದ ಯಾತ್ರೆ : ಶ್ರೀ ಜ್ಞಾನಘನಾನಂದ | ೧ | ೮ | ೦ |
| **ಸಾಹಿತ್ಯ ವಿಮರ್ಶೆ :—** | | | |
| ಪ್ರಾಚೀನ ಸಾಹಿತ್ಯ : ಶ್ರೀ ಟಿ. ಎಸ್. ವೆಂ. | ೧ | ೮ | ೦ |
| ರತ್ನಾಕರವರ್ಣಿ : ಶ್ರೀ ಟಿ. ಎಸ್. ಶಾಮರಾವ್ | ೦ | ೮ | ೦ |
| ಮೃಚ್ಛಕಟಿಕ : ಶ್ರೀ ಹೆಚ್. ಎಂ. ಶಂಕರನಾರಾಯಣರಾವ್ | ೧ | ೦ | ೦ |
| ಕನ್ನಡ ಧ್ವನ್ಯಾಲೋಕ : ಡಾ॥ ಕೆ. ಕೃಷ್ಣಮೂರ್ತಿ | ೫ | ೦ | ೦ |
| ನಿರಂಕುಶಮತಿಯಿಂದ ಆತ್ಮಶ್ರೀ : ಶ್ರೀ ಕುವೆಂಪು | ೧ | ೦ | ೦ |
| ಕನ್ನಡ ಸಾಹಿತ್ಯ ಮತ್ತು ಮೈಸೂರು ಒಡೆಯರು : ಶ್ರೀ ಡಿ. ಟಿ. ರಂಗಸ್ವಾಮಿ | ೧ | ೦ | ೦ |
| **ಸಂಕೀರ್ಣ :—** | | | |
| ಉಡುಗೊರೆ : ಕುವೆಂಪು ಸಂಭಾವನೆ | ೪ | ೦ | ೦ |
| ವಿ. ಸೀ. : ಸಂಭಾವನಾ ಗ್ರಂಥ | ೧ | ೦ | ೦ |
| ಭಾರತದ ಸೂತ್ರದಾರ : ಶ್ರೀ ಶ್ರೀನಿವಾಸಯ್ಯಂಗಾರ್ | ೧ | ೮ | ೦ |
| ವರ್ಧಾ ಶಿಕ್ಷಣ : ಶ್ರೀ ತ. ಸು. ಶಾಮರಾಯ, ಶ್ರೀ ರಾಮಚಂದ್ರರಾವ್ | ೨ | ೮ | ೦ |
| ಬಾರ್ಬೊಸ ಕಂಡ ವಿಜಯನಗರ : ತ. ರಾ. ಸು. | ೦ | ೮ | ೦ |
| ಅವ್ವೆಯಾರ್ : ಎಲ್. ಗುಂಡಪ್ಪ | ೧ | ೦ | ೦ |
| ಜೈನದರ್ಶನ : ಶಮನ | ೦ | ೪ | ೦ |
| ನಾ ಕಂಡ ಕಲಾವಿದರು : ಶ್ರೀ ವಾಸುದೇವಾಚಾರ್ಯ | ೧ | ೮ | ೦ |
| ಶ್ರೀ ಕೃಷ್ಣನ ಕಥೆ : ಶ್ರೀ ಕೆ. ವೆಂಕಟರಾಮಪ್ಪ | ೧ | ೪ | ೦ |

